# ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಾದರಪಡಿಸಿದ ಪ್ರೌಢಪ್ರಬಂಧ)

ಸಂಶೋಧಕರು
ವೀರಾಂಜನೇಯ ಕೆ.
ನೋಂದಣಿ ಸಂಖ್ಯೆ : ೧೪೦೧೦೪೦೩೦೦೧೫





ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ
ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೯

# ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಾದರಪಡಿಸಿದ ಪ್ರೌಢಪ್ರಬಂಧ)


ಸಂಶೋಧಕರು

**ವೀರಾಂಜನೇಯ ಕೆ.**

**ನೋಂದಣಿ ಸಂಖ್ಯೆ : ೧೮೦೧೦೮೦೩೦೦೧೫**

ಮಾರ್ಗದರ್ಶಕರು

**ಡಾ. ವಾಸುದೇವ ಬಡಿಗೇರ**

ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬.


೨೦೧೯

## ಸಂಶೋಧಕರ ಪ್ರಮಾಣ ಪತ್ರ

**"ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ"** ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು **ಡಾ. ವಾಸುದೇವ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿ, **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರೌಢಪ್ರಬಂಧವನ್ನು ಅಥವಾ ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

K. Vee

ದಿನಾಂಕ : 30/8/19

ಸ್ಥಳ : ವಿದ್ಯಾರಣ್ಯ

ಸಂಶೋಧನಾ ವಿದ್ಯಾರ್ಥಿ

**(ವೀರಾಂಜನೇಯ ಕೆ.)**

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬.

# ಮಾರ್ಗದರ್ಶಕರ ದೃಢೀಕರಣ ಪತ್ರ

**ವೀರಾಂಜನೇಯ ಕೆ.**, ಇವರು **"ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ"** ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಸಲ್ಲಿಸಿದ್ದಾರೆ. ಪ್ರಸ್ತುತ ಪೌಢಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಯಾವುದೇ ಬಗೆಯ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 30/8/19

ಸ್ಥಳ : ವಿದ್ಯಾರಣ್ಯ

ಮಾರ್ಗದರ್ಶಕರು 30/8/19

**(ಡಾ. ವಾಸುದೇವ ಬಡಿಗೇರ)**

ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬.

# ಸಂಕ್ಷೇಪಗಳು

| | | |
|---|---|---|
| A.I.R.E. | : | Annual Report on South Indian Epigraphy |
| E.I. | : | Epigraphic Carnatica |
| E.C. | : | Epigraphy Indicia |
| K.I. | : | Karnataka Inscriptions |
| S.I.I. | : | South Indian Inscriptions |
| M.A.R. | : | Mysore Archaeological Department Annual Report |
| ಕ.ವಿ.ಶಾ.ಸಂ. | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |

# ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ

## ಪರಿವಿಡಿ

## ೧. ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸಮೀಕ್ಷೆ

೧.೫. ಅಧ್ಯಯನದ ಸ್ವರೂಪ

# ಅಧ್ಯಾಯ – ಒಂದು

# ಪ್ರಸ್ತಾವನೆ

## ೧. ಪ್ರಸ್ತಾವನೆ

ಚರಿತ್ರೆ ಎಂದರೆ ಗತಕಾಲದ ರಾಜ ಮಹಾರಾಜರ ವಿವರವನ್ನು, ಅವರು ಮಾಡಿದ ಯುದ್ಧಗಳ ಬಗ್ಗೆ ತಿಳಿಸುವುದು ಎಂಬರ್ಥವು ಸಾಮಾನ್ಯ ಜನತೆಯಲ್ಲಿದೆ. ಆದರೆ ಚರಿತ್ರೆಗೆ ತನ್ನದೇ ಆದ ಕ್ರಮವಿದೆ. ದೊಡ್ಡ ಸಾಮ್ರಾಜ್ಯಗಳ ಇತಿಹಾಸವನ್ನು ಸಂಶೋಧಿಸುವ ನಿಟ್ಟಿನಲ್ಲಿ ಅನೇಕ ಸಂಶೋಧಕರು ತೊಡಗಿದ್ದಾರೆ. ಆದರೆ ತಮ್ಮ ಸುತ್ತಮುತ್ತಲು ಇರುವ ಇತಿಹಾಸವನ್ನು ಹುಡುಕುವ ಅದರ ಮಹತ್ವವನ್ನು ತಿಳಿಸುವಲ್ಲಿ ಇತಿಹಾಸಕಾರರು ವಿಫಲರಾಗಿದ್ದಾರೆಂದು ಹೇಳಬಹುದು.

ರಾಷ್ಟ್ರದ ಸಮಗ್ರ ಇತಿಹಾಸದಲ್ಲಿ ಪ್ರಾದೇಶಿಕ ಮತ್ತು ಸ್ಥಳೀಯ ವಿಷಯಗಳು ಗುರುತಿಸಿಕೊಳ್ಳುವುದು ತೀರ ಕಡಿಮೆ. ಸ್ಥಳೀಯ ಘಟನಾವಳಿಗಳು, ಆಲೋಚನೆಗಳು ಹಾಗೂ ಸಾಂಸ್ಕೃತಿಕ ಸಂಬಂಧಗಳನ್ನು ಸಂಶೋಧನೆ, ಅಧ್ಯಯನಗಳ ಮೂಲಕ ಸಮಗ್ರವಾಗಿ ನಿರೂಪಿಸುವ ತನಕ ರಾಷ್ಟ್ರದ ಇತಿಹಾಸ ಪರಿಪೂರ್ಣವಾಗುವುದಿಲ್ಲ. ಆದ್ದರಿಂದ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಸ್ಥಳೀಯ ಇತಿಹಾಸವನ್ನು ಕುರಿತು ಸಂಶೋಧನೆ ಮಾಡುವುದ ಅವಶ್ಯವಾದ್ದು. ಜಾಗತಿಕ ಇತಿಹಾಸದ ಬೇರುಗಳು ಸ್ಥಳೀಯ ಇತಿಹಾಸದ ನೆಲದಲ್ಲಿ ಅಡಗಿರುತ್ತವೆ. ಹಾಗಾಗಿ ಸ್ಥಳೀಯ ಇತಿಹಾಸವನ್ನು ಅರಿಯದೆ ಇತಿಹಾಸ ಸಮಗ್ರವಾಗದು. ಈಗಾಗಲೇ ರಾಜಕೀಯ ಇತಿಹಾಸವನ್ನು ನಾವು ಸಾಕು ಸಾಕೆನ್ನಿಸುವಷ್ಟು ಅಧ್ಯಯನ ಮಾಡಿಯಾಗಿದೆ. ಈಗ ಅದಕ್ಕೆ ವಿಶ್ರಾಂತಿ ಕೊಟ್ಟು ಆರ್ಥಿಕ, ಸಾಮಾಜಿಕ ಅಥವಾ ಸಾಂಸ್ಕೃತಿಕ ಇತಿಹಾಸದ ಶೋಧಕ್ಕೆ ಹೋಗಬೇಕಾಗಿದೆ. ಸ್ಥಳೀಯ ಚರಿತ್ರೆಯ ಬಗ್ಗೆ ಅರಿತು ಕೊಳ್ಳಬೇಕಾದರೆ ಸಂಶೋಧಕನಿಗೆ ಆ ನೆಲದ ಬಗ್ಗೆ ಅಭಿಮಾನ, ಕುತೂಹಲ ಇರಬೇಕಾಗುತ್ತದೆ. ಇಲ್ಲವಾದರೆ ಸಂಶೋಧಕನಿಗೆ ಎಲ್ಲವೂ ನಿರಸವಾಗಿ ಕಂಡುಬರುತ್ತವೆ. ಇತಿಹಾಸಕಾರನು ಜಾಗತಿಕ ಇತಿಹಾಸದ ಅನುಭವದ ಜೊತೆಗೆ ಸ್ಥಳೀಯ ಇತಿಹಾಸದ ಗ್ರಹಿಕೆಯನ್ನು ಸಮಗ್ರವಾಗಿ ಪಡೆದುಕೊಳ್ಳಬೇಕು. ನಾವು ಹುಟ್ಟಿ ಬೆಳೆದ ನಾಡಿನಲ್ಲಿ ಯಾವ ಯಾವ ಪ್ರಕಾರದಲ್ಲಿ ಇತಿಹಾಸದ ಮಾಹಿತಿಗಳಿವೆ ಎಂಬುದನ್ನು ನಿರ್ಲಕ್ಷಿಸಿದರೆ ನಮ್ಮ ಉದ್ದೇಶವೇ ಅರ್ಥಹೀನವಾಗುತ್ತದೆ. ಏಕೆಂದರೆ ಸ್ಥಾನಿಕ ಹಾಗೂ ಪ್ರಾದೇಶಿಕ ಅಥವಾ ಪರಿಸರ, ಸೀಮೆ ಹೀಗೆ ಹಲವು ವಿಭಾಗ ಕ್ರಮದಲ್ಲಿನ ಇತಿಹಾಸವನ್ನು ಹೆಕ್ಕಿ ತೆಗೆಯದೇ ಹೋದರೆ ಚಾರಿತ್ರಿಕ

ಪ್ರಕ್ರಿಯೆಗಳಿಗೆ ನ್ಯಾಯ ದೊರಕಿಸಿಕೊಟ್ಟಂತೆ ಆಗುವುದಿಲ್ಲ. ಹಾಗಾಗಿ ನಾಡಿನ ಆಯಾ ಪರಿಸರದ ಇತಿಹಾಸವನ್ನು ಬಗೆದು ತೆಗೆಯುವ ಕೆಲಸಗಳು ಆಗಬೇಕಿದೆ.

ಸಂಸ್ಕೃತಿ ಎಂಬುದು ನಿಂತ ನೀರಲ್ಲ. ಅದು ನಿತ್ಯ ಪರಿವರ್ತನ ಶೀಲವಾದದ್ದು. ಭಾರತ ದೇಶವು ಆದರ್ಶ ಸಂಸ್ಕೃತಿಯನ್ನು ಬಿಂಬಿಸುವ ಆಚರಣೆಗಳಿಗೆ ಹೆಸರುವಾಸಿಯಾದ ನಾಡಾಗಿದ್ದು ಆ ನಾಡಿನ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಜೀವನವನ್ನು ಅಭಿವ್ಯಕ್ತಿಗೊಳಿಸುವಲ್ಲಿ ದೇವಾಲಯಗಳು, ಶಿಲ್ಪಗಳು ಮತ್ತು ಶಾಸನಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಕುಡತಿನಿ ಪರಿಸರದದಲ್ಲಿ ದೊರೆಯುವ ಶಾಸನಗಳು, ದೇವಾಲಯಗಳು, ಸ್ಮಾರಕಗಳು, ಶಿಲ್ಪಗಳು, ಇನ್ನು ಮುಂತಾದವುಗಳನ್ನು ಮೂಲ ಆಕರಗಳಾಗಿ ಬಳಸಿಕೊಂಡು ಕುಡತಿನಿಯ ಸಾಂಸ್ಕೃತಿಕ ಇತಿಹಾಸವನ್ನು ನಿರೂಪಿಸುವ ಪ್ರಯತ್ನವೇ ಈ ಅಧ್ಯಯನ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಅಲ್ಲಿನ ಜನತೆಯ ಇತಿಹಾಸ. ಜನರ ಜೀವನದ ರೀತಿ–ನೀತಿಗಳು, ರೂಢಿ–ಸಂಪ್ರದಾಯಗಳು ಅವರು ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಜೀವನದ ಮೌಲ್ಯಗಳು ಮುಂತಾದವುಗಳೇ ಆ ದೇಶದ ಇತಿಹಾಸ. ಜನತೆಯ ಜೀವನದ ವಿವಿಧ ಆಯಾಮಗಳನ್ನು ಕುರಿತ ಅಧ್ಯಯನ ಮಾಡುವುದೇ ನನ್ನ **'ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ'** ಪ್ರೌಢಪ್ರಬಂಧದ ಪ್ರಯತ್ನವಾಗಿದೆ.

ಕುಡತಿನಿ ಪರಿಸರ ನೈಸರ್ಗಿಕ ಸಂಪತ್ತಿನಿಂದ ಕೂಡಿದೆ. ಇದು ಪ್ರಾಗೈತಿಹಾಸಕಾಲದಿಂದಲೂ ಜನವಸತಿ ಬೆಳವಣಿಗೆಗೆ ಕಾರಣವಾಯಿತು. ಕುಡತಿನಿ ಮತ್ತು ಅದರ ಸುತ್ತ ಮುತ್ತಲಿನ ಪ್ರದೇಶದಲ್ಲಿ ಆದಿ ಮಾನವನ (ಮಧ್ಯ ಶಿಲಾಯುಗ, ನೂತನ ಶಿಲಾಯುಗ, ಶಿಲಾ–ತಾಮ್ರಯುಗ ಮತ್ತು ಬೃಹತ್ ಶಿಲಾಯುಗದ) ನೆಲೆಗಳು ಶೋಧನೆಯಾಗಿವೆ. ಕುಡತಿನಿ ಸಮೀಪ ಪತ್ತೆಯಾಗಿರುವ ಬೂದಿದಿಬ್ಬ ಈ ಪ್ರದೇಶದ ಐತಿಹಾಸಿಕ ಪ್ರಾಮುಖ್ಯತೆಯನ್ನು ಸಾಬೀತುಪಡಿಸುತ್ತದೆ. ಇಂತಹ ಬೂದಿ ದಿನ್ನೆಗಳು ಈ ಪರಿಸರದ ಸುತ್ತಮುತ್ತಲಿನ ಪ್ರದೇಶದಲ್ಲಿ ಸುಮಾರು ೭೦–೭೫ ನೆಲೆಗಳಲ್ಲಿ ಪತ್ತೆಯಾಗಿದ್ದು, ರಾಬರ್ಟ್ ಬ್ರೂಸ್‌ಫೂಟ್‌ರು ಇವುಗಳನ್ನು ಪರಿಶೀಲಿಸಿ ಇವುಗಳು ನೂತನ ಶಿಲಾಯುಗಕ್ಕೆ ಸೇರಿವೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ ಇತಿಹಾಸ ಕಾಲಘಟ್ಟಕ್ಕೆ ಬಂದಾಗ ಈ ಪ್ರದೇಶವು ಮೌರ್ಯ, ಶಾತವಾಹನರು, ಚಾಲುಕ್ಯರು, ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಾಗಿ ಲಭ್ಯವಾಗಿರುವ ಶಾಸನಗಳು, ದೇವಾಲಯಗಳು ಹಾಗೂ ಇತರ ಪುರಾತತ್ವ ಅವಶೇಷಗಳಿಂದ ನಮಗೆ ತಿಳಿದುಬರುತ್ತದೆ.

ಈ ಹಿನ್ನಲೆಯಲ್ಲಿ ಕುಡತಿನಿ ಪರಿಸರದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಉದ್ದೇಶದಿಂದ ಈ ಕುಡತಿನಿ ಪರಿಸರವನ್ನು ನನ್ನ ಕಾರ್ಯ ಕ್ಷೇತ್ರವನ್ನಾಗಿ ಆಯ್ದುಕೊಳ್ಳಲಾಗಿದೆ. ಈ ನಾಡು ಪ್ರಾಗೈತಿಹಾಸ ಕಾಲದಿಂದಲೂ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಈ ನಾಡು ಹಲವಾರು ಚಾರಿತ್ರಿಕ ಅಂಶಗಳನ್ನು ಒಳಗೊಂಡಿದ್ದು, ಇದರಲ್ಲಿ ಚಾರಿತ್ರಿಕ, ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಮಹತ್ವವನ್ನು ಪಡಿದಿವೆ. ಬಹುಮುಖಿ ಸಂಸ್ಕೃತಿಯ ಬೀಡಾದ ಈ ನಾಡಿನಲ್ಲಿ ಹಲವಾರು ವಿಷಯಗಳ ಮೇಲೆ ಸಂಶೋಧನೆಗಳು ನಡೆದಿರುವುದು ಪ್ರಶಂಸನೀಯ. ಆದರೂ ಇಲ್ಲಿಯ ಶಾಸನಗಳು, ದೇವಾಲಯಗಳು ಹಾಗೂ ಇತರೆ ಪುರಾತತ್ವ ಅವಶೇಷಗಳ ಹಿನ್ನೆಲೆಯಲ್ಲಿ ಅಧ್ಯಯನವು ಸರಿಯಾದ ಕ್ರಮದಲ್ಲಿ ನಡೆದಿಲ್ಲವೆಂದು ಹೇಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕುಡತಿನಿ ಪರಿಸರದ ಸಮಗ್ರ ಇತಿಹಾಸವನ್ನು ಅಧ್ಯಯನಮಾಡುವ ದೃಷ್ಟಿಕೋನದಿಂದ "ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ" ಎಂಬ ವಿಷಯವು ನನ್ನ ಯೋಜಿತ ಕಾರ್ಯವಾಗಿದೆ.

### ೧.೧ ಅಧ್ಯಯನದ ಉದ್ದೇಶ

ಸಂಶೋಧಕನು ಒಂದು ವಿಷಯದ ಬಗೆಗೆ ಅಧ್ಯಯನ ಕೈಗೊಳ್ಳುವ ಮೊದಲು ಯಾವ ಉದ್ದೇಶವನ್ನಿಟ್ಟುಕೊಂಡು ಆ ವಿಷಯವನ್ನು ಆಯ್ದುಕೊಂಡಿದ್ದಾನೆ ಎನ್ನುವುದು ಮುಖ್ಯವಾಗುತ್ತವೆ, ಹಾಗಾಗಿ ನನ್ನ ಅಧ್ಯಾಯನದ ದೃಷ್ಟಿಯಿಂದ ಈ ಕೆಳಕಂಡ ಉದ್ದೇಶಗಳನ್ನು ಹಾಕಿಕೊಂಡಿರುತ್ತೇನೆ.

೧. ಕುಡತಿನಿ ಪರಿಸರದ ಚಾರಿತ್ರಿಕ ಹಿನ್ನೆಲೆಯನ್ನು ಹುಡುಕುವುದು.
೨. ಈ ಪ್ರದೇಶದ ಇತಿಹಾಸವನ್ನು ಸಮಗ್ರವಾಗಿ ಶೋಧಿಸುವುದು.
೩. ಕುಡತಿನಿ ಪರಿಸರದಲ್ಲಿನ ದೇವಾಲಯಗಳನ್ನು ಪಟ್ಟಿ ಮಾಡಿ ಅವುಗಳ ನಿರ್ಮಾಣದ ಹಿನ್ನಲೆ ಮತ್ತು ಅವುಗಳ ವಾಸ್ತುಶಿಲ್ಪ ಶೈಲಿಗಳನ್ನು ವಿವರಿಸುವುದು.
೪. ಕುಡತಿನಿಯ ಪರಿಸರದಲ್ಲಿ ದೊರೆಯುವ ಶಾಸನಗಳ ಪಟ್ಟಿ ಮತ್ತು ನಿರೂಪಣೆ.
೫. ಕುಡತಿನಿ ಪರಿಸರದ ಸಾಂಸ್ಕೃತಿಕ ಮಹತ್ವವನ್ನು ತಿಳಿಸುವುದು.
೬. ಕುಡತಿನಿ ಪರಿಸರದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಅಂಶಗಳ ವಿವರಣೆ.
೭. ಕುಡತಿನಿ ಪರಿಸರದ ವೀರಗಲ್ಲು, ಮಾಸ್ತಿಗಲ್ಲು, ಮುಂತಾದವುಗಳ ಬಗ್ಗೆ ಅರಿಯುವುದು.
೮. ಕುಡತಿನಿ ಪರಿಸರದ ದೇವಾಲಯಗಳು ಮತ್ತು ಐತಿಹಾಸಿಕ ಸ್ಮಾರಕಗಳ ಮಹತ್ವವನ್ನು ಸಾರುವುದು.

೯. ಈ ಪರಿಸರದ ಹಿನ್ನೆಲೆಯ ಕುರಿತು ಜನರಲ್ಲಿ ಮನೆ ಮಾಡಿಕೊಂಡಿರುವ ದಂಥಕತೆ, ಐತಿಹ್ಯಗಳನ್ನು ಪೂರಕವಾಗಿ ದಾಖಲಿಸುವುದು ಈ ಸಂಶೋಧನೆಯ ಮತ್ತೊಂದು ಉದ್ದೇಶವಾಗಿದೆ.

ಒಟ್ಟಾರೆ ಕರ್ನಾಟಕದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಕ್ಷೇತ್ರಗಳಲ್ಲಿ ಉಪೇಕ್ಷೆಗೆ ಒಳಗಾಗಿರುವ ಈ ಪರಿಸರವನ್ನು ವಿವರಣಾತ್ಮಕ ಅಧ್ಯಯನಗಳಿಗೆ ಒಳಪಡಿಸುವ ಮೂಲಕ ಇಲ್ಲಿನ ಚರಿತ್ರೆಯನ್ನು ಕಟ್ಟಿಕೊಡುವ ಹಾಗೂ ಪುರಾತತ್ವ ಹಿನ್ನೆಲೆಯಲ್ಲಿ ಚಾರಿತ್ರಿಕ ಸಂದರ್ಭದಲ್ಲಿ ನಿರ್ಮಾಣವಾದ ಎಲ್ಲಾ ಬಗೆಯ ಸ್ಮಾರಕಗಳನ್ನು ಕುರಿತು ಅಧ್ಯಯನ ಮಾಡುವ ಮುಖ್ಯ ಉದ್ದೇಶವನ್ನಿಟ್ಟುಕೊಂಡು ಪ್ರಸ್ತುತ ಕಾರ್ಯವನ್ನು ಕೈಗೊಳ್ಳಲಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ

ಸಂಶೋಧಕನಿಗೆ ಸಂಶೋಧನಾ ವಿಷಯದಷ್ಟೆ ವಿಷಯದ ವ್ಯಾಪ್ತಿಯು ಮುಖ್ಯವಾಗುತ್ತದೆ. ತನ್ನ ಅಧ್ಯಯನ ಕ್ಷೇತ್ರದ ಎಲ್ಲೆಯನ್ನು ಗುರುತಿಸಿಕೊಂಡಾಗ ಮಾತ್ರ ಸರ್ಮಪಕವಾದ ಯೋಜನೆಗಳನ್ನು ರೂಪಿಸಿಕೊಳ್ಳಲು ಸಾಧ್ಯ. ಹಾಗಾಗಿ ನನ್ನ ಅಧ್ಯಯನದ ಕ್ಷೇತ್ರವನ್ನು ಭಾರತದಲ್ಲಿ ಆಳ್ವಿಕೆ ಮಾಡಿದ ಮೌರ್ಯರ ಕಾಲಾವಧಿಯಿಂದ ವಿಜಯನಗರದ ಅರಸರ ಆಡಳಿತವಧಿಯ ಕೊನೆಯ ಕಾಲಘಟ್ಟಕ್ಕೆ ಸೀಮಿತಗೊಳಿಸಲಾಗಿದೆ. ಜೊತೆಗೆ ಪ್ರಾಗೈತಿಹಾಸ ನೆಲೆಗಳು ಮತ್ತು ಅವುಗಳ ವಿವರ, ಸಾಂಸ್ಕೃತಿಕ ಸಂಬಂಧಗಳ ಮಹತ್ವ, ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗುವುದು. ಪುರಾತತ್ವ ಮೂಲಾಧಾರಗಳಾದ ದೇವಾಲಯಗಳು, ಮೂರ್ತಿಶಿಲ್ಪ, ಶಾಸನಗಳು, ನಾಣ್ಯಗಳು, ವೀರಗಲ್ಲು, ಮಹಾ ಸತಿಗಲ್ಲು, ನಿಸದಿಗಲ್ಲು, ಕೆರೆಕಟ್ಟೆಗಳು ಬಾವಿಗಳು, ನೀರಿನ ತಾಣಗಳು, ಕಟ್ಟಡ ಅವಶೇಷಗಳು ನಿರ್ಮಾಣಗೊಂಡಿದ್ದು ಇವುಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಇತಿಹಾಸ ಕಾಲಘಟ್ಟದ ಶಾಸನಗಳ ವಿವರಗಳ ಹಾಗೂ ಪರಿಸರದಲ್ಲಿ ಕಂಡುಬರುವ ಎಲ್ಲಾ ಬಗೆಯ ಅವಶೇಷಗಳನ್ನು ವಿವರಿಸುವ ಮತ್ತು ಅದನ್ನು ಮರು ನಿರೂಪಿಸುವ ಪ್ರಯತ್ನ ಮಾಡಲಾಗುವುದು. ಈ ಹಿಂದೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಅಂತರ್‌ಶಿಸ್ತೀಯ ನೆಲೆಯಲ್ಲಿ ಶೋಧಿಸುವ ಹಾಗೂ ಸಂಯೋಜಿಸುವ ನಿಟ್ಟಿನಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. (ಪುರಾತಾತ್ವಿಕವಾಗಿ ಶಾಸನಗಳು, ದೇವಾಲಯಗಳು, ನಾಣ್ಯಗಳು, ಮೂರ್ತಿಶಿಲ್ಪ, ವೀರಗಲ್ಲು, ಮಹಾಸತಿಗಲ್ಲು, ನಿಸದಿಗಲ್ಲು, ಕೆರೆಕಟ್ಟೆಗಳು ನಿರ್ಮಾಣಗೊಂಡಿದ್ದು ಇವುಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.)

## ೧.೩ ಅಧ್ಯಯನದ ಸಮೀಕ್ಷೆ

ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವಕ್ಕೆ ಸಂಬಂಧಿಸಿದಂತೆ ಕೆಲವೇ ಕೆಲವು ಅಧ್ಯಯನಗಳು ನಡೆದಿದ್ದು ಅವುಗಳು ಪತ್ರಿಕೆಗಳು, ಸ್ಮರಣ ಸಂಚಿಕೆಗಳು, ಸಂಪಾದಿತ ಕೃತಿಗಳು, ಸಂಶೋಧನಾ ಲೇಖನಗಳಾಗಿ ಪ್ರಕಟಗೊಂಡಿವೆ. ಅವುಗಳಲ್ಲಿ 'ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಿಕ ಅಧ್ಯಯನ' ಡಾ.ವಾಸುದೇವ ಬಡಿಗೇರ, 'ಕರ್ನಾಟಕದ ಕೈಫಿಯತ್ತುಗಳು' ಡಾ.ಎಂ.ಎಂ.ಕಲಬುರ್ಗಿ, 'ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ' ಡಾ.ವಾಸುದೇವ ಬಡಿಗೇರ, 'ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ' ಜೆ.ಎಂ. ನಾಗಯ್ಯ, 'ಕುರುಗೋಡು' ಪ್ರೊ. ಬಾಲಸುಬ್ರಮಣ್ಯ, 'ಹಂಪಿ ಪರಿಸರದ ಆದಿಮಾನವನ ನೆಲೆಗಳು' ಡಾ.ಎಲ್.ಶ್ರೀನಿವಾಸ, ಮುಖ್ಯವಾದ ಕೃತಿಗಳಾಗಿವೆ. ಆದರೆ ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ವ್ಯವಸ್ಥಿತ ಅಧ್ಯಯನವು ಇದುವರೆಗೂ ನಡೆದಿಲ್ಲವೆಂದೇ ಹೇಳಬಹುದು. ಅಂತಹ ಒಂದು ಚಿಕ್ಕ ಪ್ರಯತ್ನವನ್ನು ಪಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

## ೧.೪ ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು 'ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ' ವಿಷಯಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗುವುದು. ಈ ವಿಷಯದ ಅಧ್ಯಯನ ವ್ಯಾಪ್ತಿಗೆ ಬರುವ ಪ್ರದೇಶಕ್ಕೆ ನೇರವಾಗಿ ಭೇಟಿ ನೀಡಿ ಅಲ್ಲಿ ದೊರೆಯುವ ಸಂಪನ್ಮೂಲಗಳನ್ನು ಖುದ್ದಾಗಿ ವೀಕ್ಷಿಸಿ ಮತ್ತು ಅಲ್ಲಿನ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ವಿಷಯವನ್ನು ವಿಶ್ಲೇಷಿಸಿ ಕ್ರೋಢೀಕರಿಸಲಾಗುವುದು. ಮುಖ್ಯವಾಗಿ ಪ್ರಾಗೈತಿಹಾಸ ಕಾಲದ ನೆಲೆಗಳಿಗೆ ಭೇಟಿನೀಡಿ ಅವಶೇಷಗಳ ನೈಜತೆಯನ್ನು ಪರೀಕ್ಷಿಸಲಾಗುವುದು. ಪ್ರಕಟಿತ ಶಾಸನಗಳ ಪಾಠಗಳನ್ನು ಶಾಸನ ತಜ್ಞರಿಂದ ಓದಿಸಿ ತಿಳಿಯುವುದು.

ದೇವಾಲಯ, ಮೂರ್ತಿಶಿಲ್ಪ ಶೈಲಿಗಳ ಬಗ್ಗೆ ವಿಮರ್ಶೆ ಮಾಡಿ ಗ್ರಂಥಗಳು, ಲೇಖನಗಳು ಮುಂತಾದ ಪ್ರಮುಖ ಆಕರಗಳ ಸಂಗ್ರಹ ಹಾಗೂ ಸಂಬಂಧಿಸಿದ ಸ್ಮಾರಕಗಳು, ಛಾಯಾಚಿತ್ರ ಮತ್ತು ನಕ್ಷೆಗಳನ್ನು ಮಾಡಿಕೊಳ್ಳಲಾಗುವುದು. ಗ್ರಂಥಾಲಯ, ವಿವಿಧ ಸಂಘ-ಸಂಸ್ಥೆಗಳು, ಪ್ರಕಟಿತ ಕೃತಿಗಳು, ಲೇಖನಗಳು, ಸರ್ಕಾರಿ ಸಂಚಿಕೆಯಲ್ಲಿ ದೊರೆಯುವ ಆಧಾರಗಳನ್ನು ಮತ್ತು

ಸಂಶೋಧನಾ ಲೇಖನಗಳನ್ನು, ಪಿಎಚ್.ಡಿ ಮಹಾಪ್ರಬಂಧ ಮತ್ತು ಎಂ.ಫಿಲ್ ಸಂಪ್ರಬಂಧಗಳನ್ನು ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳ ಬಗ್ಗೆ ಸಮೀಕ್ಷೆ ಕೈಗೊಳ್ಳುವ ಮೂಲಕ ಅವಶ್ಯಕ ವಿಷಯವನ್ನು ಪರಿಶೀಲಿಸಿ ಸಂಶೋಧನೆಗೆ ಪೂರಕವಾಗಿ ಬಳಸಿಕೊಳ್ಳಲಾಗುವುದು. ಜೊತೆಗೆ ಮೌಖಿಕ ಆಕರಗಳನ್ನು ಸ್ಥಳೀಯರಿಂದ ಸಂಗ್ರಹಿಸಿಕೊಳ್ಳಲಾಗುವುದು. ನಂತರದಲ್ಲಿ ಅಧ್ಯಯನಕ್ಕೆ ಅನುಗುಣವಾಗಿ ಆಕರಗಳನ್ನು ವರ್ಗೀಕರಿಸಿಕೊಂಡು ಮಾಹಿತಿಯನ್ನು ಸಂಗ್ರಹಿಸಿಕೊಂಡ ಮಾಹಿತಿಯನ್ನು ವೈಜ್ಞಾನಿಕ ವಿಧಾನಗಳ ಮೂಲಕ ವಿಮರ್ಶೆಗೆ ಒಳಪಡಿಸಿ, ವಿಶ್ಲೇಷಿಸಿ ಆಕರಗಳ ಸತ್ಯಾಸತ್ಯತೆಯನ್ನು ಶೋಧಿಸಲಾಗುವುದು ಮತ್ತು ಯಾವುದೇ ಪೂರ್ವಾಗ್ರಹದ ಒತ್ತಡಕ್ಕೆ ಒಳಗಾಗದೆ ವಸ್ತುನಿಷ್ಟವಾಗಿ ಇತಿಹಾಸವನ್ನು ರಚಿಸಲು ನನ್ನ ಈ ಪ್ರೌಢ ಪ್ರಬಂಧದಲ್ಲಿ ಪ್ರಯತ್ನಿಸಲಾಗುವುದು.

### ೧.೫ ಅಧ್ಯಯನದ ಸ್ವರೂಪ

ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಎಂಬ ಶೀರ್ಷಿಕೆಯ ಈ ನಿಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಉಪಶೀರ್ಷಿಕೆಗಳನ್ನು ಒಳಗೊಂಡಂತೆ ಆರು ಅಧ್ಯಾಯಗಳಾಗಿ ವಿಭಾಗಿಸಿಕೊಂಡು, ಅಧ್ಯಯನದ ಸಾರವನ್ನು ಹಿಡಿದಿಡುವ ಪ್ರಯತ್ನ ಮಾಡಲಾಗಿದೆ. ಈ ಆರು ಭಾಗಗಳನ್ನು ಒಳಗೂಂಡ ವಿಷಯ ಮತ್ತು ಅದರ ತಾತ್ವಿಕ ಸ್ವರೂಪ ಹೀಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಹಾಗೂ ಪ್ರಸ್ತುತ ಅಧ್ಯಯನದ ವಿಧಾನ, ಸ್ವರೂಪ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕುಡತಿನಿ ಪರಿಸರದ ಭೌಗೋಳಿಕ ಹಿನ್ನೆಲೆ, ಭೌಗೋಳಿಕ ವಿಸ್ತೀರ್ಣ, ಹವಾಗುಣ, ಜನಸಂಖ್ಯೆ, ಮಣ್ಣು, ಜಲಸಂಪತ್ತು, ಸಸ್ಯ ಸಂಪತ್ತು ವನ್ಯಜೀವಿ, ಮಾನವ ಸಂಪನ್ಮೂಲ, ಸೇರಿದಂತೆ ನೈಸರ್ಗಿಕ ಸಂಪನ್ಮೂಲಗಳ ಬಗ್ಗೆ ವಿವರಿಸಲಾಗುವುದು. ಹಾಗೆಯೇ ಈ ಪರಿಸರದ ಪ್ರಾಗೈತಿಹಾಸ ಕಾಲದ ಆದಿ ಮಾನವನ ನೆಲೆಗಳು ಮತ್ತು ಮೌರ್ಯರ ಕಾಲದಿಂದ ವಿಜಯನಗರ ಅರಸರ ಕಾಲದವರೆಗಿನ ಅವರ ಆಡಳಿತ ವಿಭಾಗಗಳನ್ನು ಕುರಿತು ಸ್ಥೂಲವಾಗಿ ಪರಿಶೀಲಿಸಲಾಗಿದೆ.

ಪ್ರಬಂಧದ ಮುಖ್ಯ ಭಾಗವಾದ ಮೂರನೆಯ ಅಧ್ಯಾಯದಲ್ಲಿ ಕುಡತಿನಿ ಪರಿಸರದ ದೇವಾಲಯಗಳು ಮತ್ತು ಅವುಗಳ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಬಗ್ಗೆ ಮತ್ತು ಬಾವಿಗಳು, ಕೆರೆಗಳ ಬಗ್ಗೆ ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕುಡತಿನಿಯಲ್ಲಿ ಲಭ್ಯವಿರುವ ಶಾಸನಗಳನ್ನು ಗುರುತಿಸಿ ಅವುಗಳಿಂದ ದೊರೆಯುವ ಮಾಹಿತಿಗನ್ನಾಧರಿಸಿ ಜನತೆಯ ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕುಡತಿನಿ ಪರಿಸರದ ಜನರ ನಂಬಿಕೆ ಮತ್ತು ಸಂಪ್ರದಾಯಗಳನ್ನು ಐತಿಹ್ಯಗಳ ಮೂಲಕ ಮೌಖಿಕ ಕಥನಗಳೊಂದಿಗೆ ಹಾಗೂ ಸ್ಥಳಾಧಾರಿತ ಐತಿಹ್ಯಗಳೊಂದಿಗೆ ವಿವರಿಸಿ ಪ್ರಸ್ತುತ ಪಡಿಸುವ ಪ್ರಯತ್ನಮಾಡಲಾಗಿದೆ.

ಕೊನೆಯ ಅಧ್ಯಾಯ ಸಮಾರೋಪವಾಗಿದ್ದು ಇದು ಒಟ್ಟಾರೆ ಅಧ್ಯಯನದ ಸಂಕ್ಷಿಪ್ತರೂಪ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆಯನ್ನು ಹಾಗೂ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಅಲ್ಲದೇ ನಿರ್ಧಾರಗಳನ್ನು ಪ್ರಕಟಿಸುವ ಪ್ರಯತ್ನಮಾಡಲಾಗಿದೆ. ಹೀಗೆ ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಆಕರಗಳ ಜೊತೆಗೆ ಅಲ್ಲಿಯ ಐತಿಹ್ಯಗಳು ಅವುಗಳಿಗೆ ಪೂರಕವಾಗಿ ಒದಗಿಸುವ ಮಾಹಿತಿಯನ್ನು ಸಮನ್ವಯಗೊಳಿಸುವ ಹಿನ್ನಲೆಯಲ್ಲಿ ಸಂಬಂಧಿಸಿದ ಅಧ್ಯಯನವನ್ನು ರೂಪಿಸುವ ಪ್ರಯತ್ನವನ್ನು ಈ ಪ್ರೌಢಪ್ರಬಂಧದಲ್ಲಿ ಮಾಡಲಾಗಿದೆ.

## ೨. ಭೌಗೋಳಿಕ ಪರಿಸರ ಮತ್ತು ಐತಿಹಾಸಿಕ ಹಿನ್ನೆಲೆ

೨.೧. ಭೌಗೋಳಿಕ ಪರಿಸರ

೨.೨. ಐತಿಹಾಸಿಕ ಹಿನ್ನೆಲೆ

೨.೩. ಇತಿಹಾಸ ಕಾಲ

# ಅಧ್ಯಾಯ – ಎರಡು

## ಭೌಗೋಳಿಕ ಪರಿಸರ ಮತ್ತು ಐತಿಹಾಸಿಕ ಹಿನ್ನೆಲೆ

ಕರ್ನಾಟಕ ರಾಜ್ಯದ ಪ್ರಮುಖ ಜಿಲ್ಲೆಗಳಲ್ಲಿ ಬಳ್ಳಾರಿಯು ಒಂದಾಗಿದ್ದು ಈ ಜಿಲ್ಲೆಗೆ ಸಂಬಂಧಿಸಿದ ಕುಡುತಿನಿ ಪ್ರದೇಶವು ಖನಿಜ ನಿಕ್ಷೇಪಗಳು, ಗಣಿಗಾರಿಕೆ, ಕೈಗಾರಿಕೆಗಳಿಂದ ವಿಶ್ವ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಕುಡತಿನಿ ಪರಿಸರವು ಕುರುಗೋಡು, ಕಂಪ್ಲಿ, ಆನೆಗುಂದಿ, ಹಂಪಿ, ಮತ್ತು ಸಂಡೂರುಗಳಂತಹ ಚಾರಿತ್ರಿಕ ಸ್ಥಳಗಳಿಂದ ಸುತ್ತುವರಿದಿವುದರಿಂದ ಅದರ ಸುತ್ತ ಮುತ್ತಲಿನ ಪ್ರದೇಶದಲ್ಲಿ ಆದಿ ಮಾನವನ ಮಧ್ಯ ಶಿಲಾಯುಗ, ನೂತನ ಶಿಲಾಯುಗ, ಶಿಲಾ-ತಾಮ್ರಯುಗ ಮತ್ತು ಬೃಹತಶಿಲಾಯುಗಳಿಗೆ ಸಂಬಂಧಿಸಿದ ನೆಲೆಗಳು, ಕುಡತಿನಿ ಸಮೀಪ ಬೂದಿ ದಿಬ್ಬಗಳು ಪತ್ತೆಯಾಗಿದ್ದು, ಈ ಪ್ರದೇಶದ ಐತಿಹಾಸಿಕ ಮಹತ್ವವನ್ನು ತಿಳಿಸುತ್ತವೆ. ಕುಡತಿನಿಯು ಜಿಲ್ಲಾ ಕೇಂದ್ರವಾದ ಬಳ್ಳಾರಿಯಿಂದ ೧೨ ಮೈಲುದೂರದಲ್ಲಿದೆ. ಕುಡತಿನಿಯು ೧೫.೧೫° ಉತ್ತರ ಅಕ್ಷಾಂಶ ಮತ್ತು ೭೬.೯೨ ಪೂರ್ವ ರೇಖಾಂಶಗಳ ನಡುವೆ ಇದೆ. ಕುಡತಿನಿಯ ೨೦೧೧ರ ಜನಗಣತಿಯ ಪ್ರಕಾರ ಒಟ್ಟು ೩೯೮೦ ಕುಟುಂಬಗಳು ವಾಸಿಸುತ್ತಿದ್ದು, ಒಟ್ಟು ೧೮೨೧೫ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೯೬೬೧ ಪುರುಷರು ಮತ್ತು ೮೫೫೪ ಮಹಿಳೆಯರನ್ನು ಹೊಂದಿದ್ದು, ಈ ಕುಡತಿನಿ ಗ್ರಾಮದಲ್ಲಿ ೦-೬ ವರ್ಷ ವಯಸ್ಸಿನ ಮಕ್ಕಳ ಜನಸಂಖ್ಯೆ ೨೬೦೪ ಆಗಿದ್ದು, ಇದು ಒಟ್ಟು ಜನಸಂಖ್ಯೆಯ ೧೪.೩೦% ರಷ್ಟಿದೆ. ಈ ಗ್ರಾಮದ ಸರಾಸರಿ ಲೈಂಗಿಕ ಅನುಪಾತವು ೮೮೫ ಆಗಿದೆ. ಇದು ಕರ್ನಾಟಕ ರಾಜ್ಯದ ಸರಾಸರಿ ಲಿಂಗಾನುಪಾತದ ೯೭೩ ಕ್ಕಿಂತ ಕಡಿಮೆಯಾಗಿದೆ. ಜನಗಣತಿಯ ಪ್ರಕಾರ ಕುಡತಿನಿಯ ಮಕ್ಕಳ ಲೈಂಗಿಕ ಅನುಪಾತ ೧೦೪೪ ಕರ್ನಾಟಕದ ಸರಾಸರಿ ೯೪೮ ಗಿಂತ ಹೆಚ್ಚಾಗಿದೆ. ಕರ್ನಾಟಕಕ್ಕೆ ಹೋಲಿಸಿದರೆ ಕುಡತಿನಿ ಗ್ರಾಮವು ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದು, ೨೦೧೧ ರಲ್ಲಿ ಈ ಗ್ರಾಮದ ಸಾಕ್ಷರತೆ ಪ್ರಮಾಣ ೫೩.೭೪% ವಾಗಿತ್ತು[೧]

### ೨.೧ ಕುಡತಿನಿ ಭೌಗೋಳಿಕ ಪರಿಸರ

ಜಗತ್ತಿನ ಪ್ರತಿಯೊಂದು ರಾಷ್ಟ್ರ ಹಾಗೂ ಜನಸಮುದಾಯಗಳ ಮೇಲೆ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಪರಿಸರದ ಎಲ್ಲಾ ಅಂಶಗಳು ಮಾನವನ ಜೀವನದ ಮೇಲೆ ಪ್ರಭಾವ ಬೀರುತ್ತವೆ. ಈ ಅಂಶಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವ್ಯತ್ಯಾಸವಿರುವುದರಿಂದ ಮಾನವನ ಜೀವನವು ಸಹ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋದಂತೆ ವೈವಿಧ್ಯತೆಯಿಂದ ಕೂಡಿದೆ. ಆದ್ದರಿಂದ ಮಾನವನ ಜೀವನಕ್ಕೂ ಅವನ ಪರಿಸರಕ್ಕೂ ನಿಕಟ ಸಂಬಂಧವಿದೆ.

ಹಾಗಾಗಿ ಮನುಷ್ಯನ ಚರಿತ್ರೆ ತಿಳಿಯಲು ಭೌಗೋಳಿಕ ಪರಿಸದ ಅರಿವು ಅತ್ಯವಶ್ಯಕ. ಕುಡತಿನಿ ಪ್ರದೇಶ ಭೌಗೋಳಿಕ ಲಕ್ಷಣ ಮತ್ತು ಸರಹದ್ದು (ಚಕ್ಕು ಬಂದಿ) ಈ ರೀತಿಯಾಗಿದೆ. ಕುಡತಿನಿಯ ಇಂದ್ರ ದಿಕ್ಕಿಗೆ ಕೊಳಗಲ್ಲು, ಆಗ್ನೇಯಕ್ಕೆ ಹೀರೆಹಾಳ್, ಯಮಕ್ಕೆ ಬಾಣರಾವಿ. ನೈಋತ್ಯಕ್ಕೆ ಸಂಡೂರು, ವಾಯುವ್ಯಕ್ಕೆ ದರೋಜಿ, ಕುಬೇರ ದಿಕ್ಕಿಗೆ ಕುರುಗೋಡು, ವರುಣ ದಿಕ್ಕಿಗೆ ಕಂಪ್ಲಿ, ಈಶಾನ್ಯಕ್ಕೆ  ಕೋಳುರು ಹೂಲಬು ಹೀಗೆ ಅಷ್ಟದಿಕ್ಕುಗಳಿಗೆ ಕುಡಿತಿನಿ ಹೂಲಬುಗಳಾಗಿದ್ದವು.[೨]

ಕುಡತಿನಿ ಭೌಗೋಳಿಕ ಪರಿಸರ ಕರ್ನಾಟಕ ३೦ ಜಿಲ್ಲೆಯಲ್ಲಿ ಒಂದಾದ ಬಳ್ಳಾರಿ ಜಿಲ್ಲೆಯ ಪಶ್ಚಿಮಕ್ಕೆ ೧೨ ಕಿ.ಮಿ ದೂರದಲ್ಲಿದ್ದು ರಾಜ್ಯದ ಮಧ್ಯಭಾಗದಲ್ಲಿದೆ. ಇದರ ದಕ್ಷಿಣಕ್ಕೆ ಚಿತ್ರದುರ್ಗ, ಉತ್ತರಕ್ಕೆ ರಾಯಚೂರು, ಪಶ್ಚಿಮಕ್ಕೆ ಕೊಪ್ಪಳ ಜಿಲ್ಲೆ ಹಾಗೂ ಪೂರ್ವಕ್ಕೆ ಆಂಧ್ರ ಪ್ರದೇಶ ಒಳಗೊಂಡಿದೆ.

- **ಜನಸಂಖ್ಯೆ**

ಕುಡತಿನಿಯ ೨೦೧೧ರ ಜನಗಣತಿಯ ಪ್ರಕಾರ ಒಟ್ಟು ३,೯೮೦ ಕುಟುಂಬಗಳು ವಾಸಿಸುತ್ತಿದ್ದು, ಒಟ್ಟು ೧೮,೨೧೫ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ೯,೬೬೧ ಪುರುಷರು, ೮,೫೫೪ ಮಹಿಳೆಯರನ್ನು ಹೊಂದಿದೆ. ೦-೬ ವರ್ಷ ವಯಸ್ಸಿನ ಮಕ್ಕಳ ಜನಸಂಖ್ಯೆ ೨,೬೦೪ ಆಗಿದ್ದು, ಇದು ಒಟ್ಟು ಜನಸಂಖ್ಯೆಯ ೧೪.३೦% ರಷ್ಟಿದೆ. ಈ ಗ್ರಾಮದ ಸರಾಸರಿ ಲಿಂಗಾನುಪಾತವು ಸಾವಿರ ಪುರುಷರಿಗೆ ೮೮೫ ಆಗಿದೆ. ಇದು ಕರ್ನಾಟಕ ರಾಜ್ಯದ ಸರಾಸರಿ ಲಿಂಗಾನುಪಾತಕ್ಕಿಂತ(೯೭३) ಕಡಿಮೆಯಿದೆ. ಜನಗಣತಿಯ ಪ್ರಕಾರ ಕುಡತಿನಿಯ ಮಕ್ಕಳ ಲಿಂಗಾನುಪಾತ ೧೦೪೪. ಕರ್ನಾಟಕದ ಸರಾಸರಿ ೯೪೮ಗಿಂತ ಹೆಚ್ಚಾಗಿದೆ. ಕರ್ನಾಟಕಕ್ಕೆ ಹೋಲಿಸಿದರೆ ಕುಡುತಿನಿ ಗ್ರಾಮವು ಕಡಿಮೆ ಸಾಕ್ಷರತೆಯನ್ನು ಹೊಂದಿದೆ, ೨೦೧೧ರ ಜನಗಣಿತಿಯ ಗ್ರಾಮದ ಸಾಕ್ಷರತೆ ಪ್ರಮಾಣ ೫३.೭೪% ರಷ್ಟಿದೆ.

- **ಬೆಟ್ಟ-ಗುಡ್ಡಗಳು**

ಬಳ್ಳಾರಿ ಜಿಲ್ಲೆಯ ಪ್ರಮುಖ ಪ್ರದೇಶಗಳಲ್ಲಿ ಒಂದಾದ ಕುಡತಿನಿಯು ನಿಸರ್ಗದತ್ತವಾದ ಕಲ್ಲುಬೆಟ್ಟ ಮತ್ತು ಖನಿಜ ಸಂಪನ್ಮೂಲಗಳಿಂದ ಆವೃತವಾಗಿದ್ದು, ಅವುಗಳಲ್ಲಿ ತರಿಕಳಗುಡ್ಡ, ಮೂರುತಲೆಗುಡ್ಡ, ಜಂಬಪ್ಪನಗುಡ್ಡ, ತಾಯಮ್ಮನಗುಡ್ಡ, ಬಸವನಗುಡ್ಡ, ಚಿಂತನಗುಡ್ಡ, ಕವಳೆಗುಡ್ಡಗಳು ಈ ಪರಿಸರಕ್ಕೆ ಒಂದು ವೈಶಿಷ್ಟ್ಯತೆಯನ್ನು ತಂದುಕೊಟ್ಟಿವೆ.

- **ಮಳೆಯ ಪ್ರಮಾಣ**

ಕುಡತಿನಿಯು ಬಳ್ಳಾರಿ ಜಿಲ್ಲೆಯಲ್ಲಿ ಅತಿ ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲೊಂದು. ಆದ ಕಾರಣ ಈ ಪ್ರದೇಶದಲ್ಲಿ ವಿವಿಧೆಡೆಯಲ್ಲಿ ಸಣ್ಣಪುಟ್ಟ ಕೆರೆಗಳನ್ನು ಹಾಗೂ ಅಧಿಕ ಪ್ರಮಾಣದ ಬಾವಿಗಳನ್ನು ಹೊಂದಿದೆ. ಇದರ ಸುತ್ತಮುತ್ತಲಿನ ಹಳ್ಳಿಗಳಿಗೆ ಕುಡಿಯುವ ನೀರನ್ನು ತುಂಗಭದ್ರ ಜಲಾಶಯದಿಂದ ಸರಬರಾಜು ಮಾಡಲಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ಮಳೆಯ ಪ್ರಮಾಣ ಗಣನೀಯವಾಗಿ ತಗ್ಗಿರುವುದರಿಂದ ಅಂತರ್ಜಲ ಮಟ್ಟವು ಕುಸಿತವಾಗಿದೆ. ಅಂತೆಯೇ ಕುಡತಿನಿಯಲ್ಲಿ ವರ್ಷದ ಬಹಳಷ್ಟು ದಿನಗಳು ಶುಷ್ಕ ಹವೆ ಇದ್ದು ಬೇಸಿಗೆಯಲ್ಲಿ ಅತಿಯಾದ ಬಿಸಿಲು ಇರುತ್ತದೆ. ೩೨° ರಿಂದ ೪೨° ಡಿಗ್ರಿ ಸೆಲ್ಸಿಯಸ್ ಉಷ್ಣತೆ ಇರುತ್ತದೆ. ಡಿಸೆಂಬರ್‌ನಿಂದ ಫೆಬ್ರವರಿಯವರೆಗೆ ಸಾಧಾರಣವಾಗಿ ಶೀತ ಹವೆ ಇರುತ್ತದೆ. ಮಾರ್ಚ್‌ನಿಂದ ಮೇವರೆಗೆ ಬೇಸಿಗೆ ಇರುತ್ತದೆ ಒಣ ಹವೆ ಹೆಚ್ಚಾಗಿರುತ್ತದೆ. ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಮಳೆಗಾಲ ಇದ್ದು ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ ಪ್ರಮಾಣ ೫೧೮ ಮಿ.ಮೀ ಗಳಷ್ಟು ಮಾತ್ರ ಪಡೆಯುತ್ತದೆ.

- **ಪ್ರಮುಖ ಬೆಳೆಗಳು**

ಈ ಪ್ರದೇಶವು ಮರಳುಮಿಶ್ರಿತ ಕೆಂಪು ಮಣ್ಣು ಮತ್ತು ಫಲವತ್ತಾದ ಜೇಡಿ ಮಣ್ಣಿನಿಂದ ಕೂಡಿದ್ದು ಕೇವಲ ಮಳೆಯಾಶ್ರಿತ ಪ್ರದೇಶವಾಗಿದ್ದರೂ ಸಹ, ಮುಖ್ಯವಾಗಿ ತುಂಗಭದ್ರ ಜಲಾಶಯದ ನಾಲೆಗಳ ಮುಖಾಂತರ ಬರುವ ನೀರಿನಿಂದ ಧಾನ್ಯಗಳು ಹಾಗೂ ಬೆಳೆಗಳನ್ನು ಬೆಳೆಯಲಾಗುತ್ತದೆ. ಇಲ್ಲಿ ಬೆಳೆಯುವ ಧಾನ್ಯ ಪ್ರಮುಖ ಬೆಳೆಗಳೆಂದರೆ, ಬಿಳಿ ಜೋಳ, ಕಡ್ಲೆ, ಅವರೆ, ಅರಿಸಿನ, ಹೆಸರು, ಅಗಸಿ, ಸಜ್ಜೆ, ತೊಗರಿ, ಕುಸುಬೆ, ನವಣೆ, ಹುರಳಿ, ಅವುಡ್ಲೆ, ರಾಗಿ, ಅಲಸಂದಿ, ಸೊಪ್ಪು ಮತ್ತು ಇತರೆ ತರಕಾರಿಗಳನ್ನು ಬೆಳೆಯಲಾಗುತ್ತದೆ.[೩]

- **ಅರಣ್ಯ ಪ್ರದೇಶ**

ಬಳ್ಳಾರಿ ಜಿಲ್ಲೆಯು ೯.೫೬.೨೭೦ ಹೆಕ್ಟೆರು ಅರಣ್ಯ ಸಂಪತ್ತು ಹೊಂದಿದ್ದರೂ ಕುಡತಿನಿ ಪರಿಸರವು ಸಾಕಷ್ಟು ಅರಣ್ಯವನ್ನು ಹೊಂದಿಲ್ಲ. ಈ ಗ್ರಾಮವು ಮಳೆ ನೆರಳಿನ ಪ್ರದೇಶದಲ್ಲಿರುವುದರಿಂದ ದೊಡ್ಡ ಮರಗಳಾಗಲಿ ಅಥವಾ ದಟ್ಟ ಅರಣ್ಯವಾಗಲಿ ಕಂಡುಬರುವುದಿಲ್ಲ. ಕಡಿಮೆ ಎತ್ತರ ಬೆಳೆಯುವ ಕುರುಚಲು ಸಸ್ಯಗಳ ಅರಣ್ಯವನ್ನು ಕಾಣಬಹುದು.

• **ಪ್ರಾಣಿ–ಪಕ್ಷಿ**

ಕುಡತಿನಿ ಪರಿಸರದಲ್ಲಿ ಕಾಡುಹಂದಿ, ನರಿ, ತೋಳ, ಮೊಲ, ಚಿಗರಿ, ಮಂಗ, ಕರಡಿ, ಚಿರತೆ ಮೊದಲಾದ ಕಾಡುಪ್ರಾಣಿಗಳೊಂದಿಗೆ ಹಸು, ಎಮ್ಮೆ, ಕುರಿ, ಮೇಕೆ ಮೊದಲಾದ ಸಾಕುಪ್ರಾಣಿಗಳನ್ನು ಹಾಗೂ ಗೂಬೆ, ಗುಬ್ಬಿ, ಬಾವಲಿ, ಬೆಳವ, ರತ್ನಪಕ್ಷಿ, ಪಾರಿವಾಳ, ಕಾಗೆ ಮತ್ತು ನವಿಲು ಮುಂತಾದ ವಿವಿಧ ಪಕ್ಷಿಸಂಕುಲಗಳನ್ನು ಕಾಣಬಹುದು.

• **ಖನಿಜಾಂಶಗಳು**

ಕುಡತಿನಿಯ ದಕ್ಷಿಣಕ್ಕೆ ಇರುವ ಬೆಟ್ಟಗಳು ಕಬ್ಬಿಣದ ಮೇಲ್ಪದರವನ್ನು ಹೊಂದಿದ್ದು ಇಲ್ಲಿ ಕಬ್ಬಿಣ ಮತ್ತು ಮ್ಯಾಂಗನಿಸ್ ಅದಿರುಗಳ ಸಮೃದ್ಧ ಗಣಿಗಳಿಗೆ ಅವಕಾಶ ಕಲ್ಪಿಸಿದೆ. ಇಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣು ಮತ್ತು ಜೇಡಿ ಮಣ್ಣು ಹರಡಿದ್ದು ಗ್ರಾನೈಟ್, ಸಿಸ್ಟ್, ಸ್ಯಾಂಡ್‌ಸ್ಟೋನ್, ಜಾಸ್ಪರ್ ಮೊದಲಾದ ಶಿಲೆಗಳು ಹಾಗೂ ಬೆಟ್ಟಗಳಲ್ಲಿ ಕಬ್ಬಿಣ, ತಾಮ್ರ ಅದಿರಿನಿಂದ ಕೂಡಿದ ಶಿಲೆಗಳಿವೆ. ಕುಡತಿನಿಯ ಸುತ್ತಮುತ್ತ ಸಂಡೂರು, ನಂದಿಹಳ್ಳಿಯಿಂದ ಹೊಸಪೇಟೆಯವರೆಗೆ ಎತ್ತರದ ಪರ್ವತದಲ್ಲಿ ಕಬ್ಬಿಣದ ನಿಕ್ಷೇಪಗಳು ಸಿಗುತ್ತವೆ. ಇಲ್ಲಿ ದೊರೆಯುವ ಅದಿರು ಹೆಮಟೈಟ್ ರೂಪದಲ್ಲಿದೆ. ಮ್ಯಾಂಗನಿಸ್ ಅದಿರಿನ ನಿಕ್ಷೇಪಗಳು ಸಿಗುತ್ತವೆ. ಈ ಅದಿರಿನ ವಿಶೇಷ ಗುಣವೆಂದರೆ ನಿಗದಿತ ಅಂಶಕ್ಕಿಂತ ಕಡಿಮೆ ಪ್ರಮಾಣದಲ್ಲಿ ರಂಜಕ, ಗಂಧಕ ಹೊಂದಿದೆ. ಆದ ಕಾರಣ ಮ್ಯಾಂಗನಿಸ್ ಅದಿರಿನ ಮಾರುಕಟ್ಟೆಯಲ್ಲಿ ಸಂಡೂರಿನ ಮ್ಯಾಂಗನಿಸ್‌ಗೆ ವಿಶೇಷ ಬೇಡಿಕೆಯಿದೆ.[೬]

**೨.೨ ಕುಡತಿನಿ ಹೆಸರಿನ ಮೂಲ**

ಇತಿಹಾಸದ ಆರಂಭದ ಕಾಲದಲ್ಲಿ ಅಂದರೆ ಮನುಷ್ಯನು ತನ್ನ ಅಲೆಮಾರಿ ಜೀವನವನ್ನು ಬಿಟ್ಟು ಒಂದೆಡೆ ನೆಲೆನಿಂತು ವಾಸಿಸಲು ಆರಂಭಿಸಿದ ಘಟ್ಟದಲ್ಲಿ ಅಲ್ಲಿಯ ನೈಸರ್ಗಿಕ ಸ್ಥಿತಿಯನ್ನು ಪ್ರತಿಬಿಂಬಿಸುವ ಹೆಸರನ್ನು ಗ್ರಾಮಕ್ಕೆ ನಾಮವೆಂದು ಇಡಲಾಗುತ್ತಿತ್ತು. ಅಂದರೆ ಅಲ್ಲಿ ಅನ್ವರ್ಥಕನಾಮ ಪದ್ಧತಿ ಬಳಕೆಯಲ್ಲಿತ್ತು. ಉದಾ: ಬೆಟ್ಟ ಗುಡ್ಡ ಕಾಡುಗಳನ್ನು ಪ್ರಧಾನವಾಗಿಟ್ಟುಕೊಂಡು, ಕಲ್ಲೂರು, ಚಿತ್ರದುರ್ಗ, ಮಣ್ಣೂರು, ಮುಂತಾದ ಹೆಸರುಗಳು ಬಂದವು, ಆದರೆ ನಂತರ ಕಾಲದಲ್ಲಿ ಗ್ರಾಮನಾಮಗಳು ಜನಾಂಗವಾಚಿ, ವ್ಯಕ್ತಿವಾಚಿ, ದೈವವಾಚಿ, ಮತ್ತು ಅದರ್ಶವಾಚಿಯಾಗಿದ್ದು ಕಾಣುತ್ತದೆ[೭]. ನಾಮವು ವೈವಿಧ್ಯಪೂರ್ಣವಾದ ಪ್ರಪಂಚ. ಹಳೆಯ ನಾಮಗಳು ಜನರ ಬಾಯಿಂದ ಜನರಿಗೆ ವರ್ಗಾವಣೆಯಾಗಿ ಕಾಲಾನಂತರದಲ್ಲಿ ಅವು ಜನರ ನಾಲಿಗೆಯಲ್ಲಿ ಸವೆದು ತಮ್ಮ ಮೂಲ ರೂಪವನ್ನು ಬಿಟ್ಟು ಬೇರೊಂದು ರೂಪ ಪಡೆಯುತ್ತವೆ.

ಇದು ಇತಿಹಾಸದುದ್ದಕ್ಕೂ ನಡೆದೇ ಇದೆ. ಹೀಗಾಗಿ ಅವುಗಳ ಮೂಲರೂಪವನ್ನು ಪತ್ತೆಮಾಡಲು ಎಚ್ಚರದಿಂದ ಹುಡುಕಲು ಇತಿಹಾಸಕಾರನಿಗೆ ಹೆಚ್ಚಿನ ಜ್ಞಾನ ಅವಶ್ಯ. ಸಮೃದ್ಧವಾದ ದೀರ್ಘವಾದ ಚರಿತ್ರೆಯಿರುವ ಪ್ರದೇಶಗಳ ಹೆಸರುಗಳ ಹಿಂದೆ ದೊಡ್ಡ ಕತೆಗಳೇ ಇರುವಂತೆ ಕುಡತಿನಿ ಪರಿಸರದ ಸ್ಥಳನಾಮಕ್ಕೆ ಸಂಬಂಧಿಸಿದಂತೆ ಹಲವಾರು ಚಾರಿತ್ರಿಕ ಕತೆಗಳು ಮತ್ತು ಐತಿಹ್ಯಗಳು ಚಾಲ್ತಿಯಲ್ಲಿವೆ. ಅವುಗಳಲ್ಲಿ ಕೆಲವನ್ನು ಈ ಕೆಳಗಿನಂತೆ ನೋಡಬಹುದು.

೧. ಗುರುಮೂರ್ತಿ ಪೆಂಡಕೂರು ಅವರ 'ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು' ಕೃತಿಯಲ್ಲಿರುವಂತೆ ಬಳ್ಳಾರಿ ತಾಲೂಕಿನ ಕುಡತಿನಿ ರಾಷ್ಟ್ರಕೂಟ ಯುವರಾಜನಾದ ಕತ್ತಿಗನ ಹೆಸರಿನಲ್ಲಿ ನಿರ್ಮಾಣವಾದುದೆಂದು, ಕಾಲಾನಂತರಲ್ಲಿ ಜನರ ಬಾಯಲ್ಲಿ 'ಕುಡತಿನಿ' ಆಗಿರಬೇಕೆಂದು ಬಲ್ಲವರ ಅಭಿಮತ. ಈ ವಾದಕ್ಕೆ ಪುಷ್ಟಿ ನೀಡುವಂತೆ ಈ ಗ್ರಾಮದಲ್ಲಿ ಇವರ ಕಾಲದಲ್ಲಿ ನಿರ್ಮಾಣವಾದ ಅನೇಕ ದೇವಾಲಯಗಳಿವೆ. ಅಲ್ಲದೆ ಇವರ ಕಾಲದ ಶಿಲಾ ಶಾಸನಗಳು ಈ ಗ್ರಾಮವನ್ನು ಶತಕೋಟಿ ತೀರ್ಥವೆಂದು ಬಣ್ಣಿಸಿವೆ.[೬]

೨. ಡಾ.ವಾಸುದೇವ ಬಡಿಗೇರ ಅವರ 'ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ' ಮತ್ತು ಡಾ.ಎಂ.ಎಂ.ಕಲಬುರ್ಗಿ. ಅವರ ಸಂಪಾದಿತ 'ಕರ್ನಾಟಕದ ಕೈಫಿಯತ್ತುಗಳು' ಕೃತಿಗಳು ಉಲ್ಲೇಖಿಸಿರುವಂತೆ ಕೃತಯುಗದಲ್ಲಿ ಇಲ್ಲಿ ತಪೋವನದಲ್ಲಿ ನೆಲೆಸಿದ ಋಷಿಗಳು ತಾರಕಾದಿ ಅಸುರರ ಕಿರುಕುಳವನ್ನು ತಾಳಲಾರದೆ ಬ್ರಹ್ಮಾದಿ ದೇವತೆಗಳನ್ನು ಪ್ರಾರ್ಥಿಸಿದರು. ಇದರಿಂದ ಪ್ರಸನ್ನರಾದ ದೇವತೆಗಳು ಈಶ್ವರ ಪುತ್ರನಾದ ಕಾರ್ತಿಕೇಯನಿಗೆ ದಿವ್ಯಶಕ್ತಿಗಳನ್ನು ನೀಡಿ ರಾಕ್ಷಸರ ಸಂಹಾರಕ್ಕಾಗಿ ಕಳುಹಿಸಿದರು. ದೇವಸೇನಾಧಿಪತ್ಯವನ್ನು ವಹಿಸಿ ಬಂದ ಕಾರ್ತಿಕೇಯನು ತಾರಕಾದಿ ಅಸುರರನ್ನು ಸಂಹಾರ ಮಾಡಿ ಶಾಂತನಾಗಲು ಕುಡತಿನಿ ಈ ತಪೋವನಕ್ಕೆ ಬಂದು ಒಂದು ಗವಿಯಲ್ಲಿ ತಪಸ್ಸು ಮಾಡಲು ಕುಳಿತನು. ಇದರಿಂದ ಈ ಪ್ರದೇಶ ಕುಮಾರ ಕ್ಷೇತ್ರವೆಂದು ಪ್ರಸಿದ್ಧವಾಯಿತು.

ಕಲಿಯುಗದಲ್ಲಿ ಕಲ್ರಿ(ರಿ)ರಿ ಎಂಬ ಚೋಳಮಹಾರಾಜನ ಮಗಳಿಗೆ ಬ್ರಹ್ಮ ರಾಕ್ಷಸನ ತೊಂದರೆ ಇರಲಾಗಿ ಯಾವುದೇ ವೈದ್ಯ ಮತ್ತು ಶಕ್ತಿಶಾಲಿ ಮಂತ್ರವಾದಿಗಳಿಂದಲೂ ಈ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾಗದಿದ್ದಾಗ ಪಂಡಿತರನ್ನು ಕರೆಯಿಸಿ ಇದಕ್ಕೆ ಪರಿಹಾರವನ್ನು ಕೇಳಲಾಗಿ ಅವರು 'ದೇವರ ಸೇವೆಯಿಂದ ಮಾತ್ರವಲ್ಲದೇ ಮನುಷ್ಯ ಮಾತ್ರದವರಿಂದ ಇದು ಸಾಧ್ಯವಿಲ್ಲವೆಂದು, ಇದಕ್ಕಾಗಿ ಒಂದೇ ದಿನದಲ್ಲಿ ಒಂದು ಬಾವಿ ಮತ್ತು ಈಶ್ವರ ದೇವಾಲಯವನ್ನು ಕಟ್ಟಿಸಿದರೆ ಬ್ರಹ್ಮ ರಾಕ್ಷಸ ಬಿಟ್ಟು ಹೋಗುವುದೆಂದು' ನುಡಿದರು. ಅದರಂತೆ ರಾಜನು ದೇವಾಲಯ ಮತ್ತು ಬಾವಿಯ ನಿರ್ಮಾಣಕ್ಕಾಗಿ ಈ ಸ್ಥಳಕ್ಕೆ ಬಂದು ಈ ಸ್ಥಳದ ಮಹತ್ವವೇನೆಂದು ಋಷಿಗಳನ್ನು

ಕೇಳಲಾಗಿ ಅವರು ಇದು ಈಶ್ವರ ಪುತ್ರನಾದ ಕಾರ್ತಿಕೇಯನು ರಾಕ್ಷಸರನ್ನು ಸಂಹಾರ ಮಾಡಿ ಬಂದು ತಪಸ್ಸುಮಾಡಿ ಶಾಂತನಾದ ಸ್ಥಳವೆಂದು ತಿಳಿಸಿದರು.

ಇದು ಮಹಾಕ್ಷೇತ್ರವೆಂದು ತಿಳಿದು ರಾಜನು ಇಲ್ಲಿ ನೂರಾವೊಂದು ದೇವಾಲಯಗಳನ್ನು ಕಟ್ಟಿಸಿ ಆ ದೇವರುಗಳಿಗೆ ಧೂಪ, ದೀಪ, ನೈವೇದ್ಯ, ಅಮೃತಪಡಿ ನಂದಾದೀಪಾದಿಗಳು ನಡೆಸಲು ಭೂಮಿಯನ್ನು ದತ್ತಿಬಿಟ್ಟು ಹಾಗೆ ಕುಮಾರಸ್ವಾಮಿ ಕುಳಿತ ಪ್ರದೇಶವಾದ್ದರಿಂದ ಅಲ್ಲೊಂದು 'ಕುಳಿತನೋಯೆಂಬ' ಅಗ್ರಹಾರವನ್ನು ನಿರ್ಮಾಣ ಮಾಡಿಸಿ ಬ್ರಾಹ್ಮಣರಿಗೆ ದಾನ ನೀಡಿದನು. ನಂತರ ರಾಷ್ಟ್ರಕೂಟರಿಂದ ವಿಜಯನಗರದ ಕಾಲಾವಧಿಯಲ್ಲಿ ಅಗ್ರಹಾರ ಕೊಟ್ಟಿತೊನೆ[೧] ನಂತರ ಕುಡತಿನಿ (ಕುಳಿತನೋ>ಕೊಟ್ಟಿತೊನೆ> ಕುಡತಿನಿ) ಎಂದಾಯಿತು. ಇದಕ್ಕೆ ಪೂರಕವಾಗಿ ಇಲ್ಲಿ ದೂರೆಕಿರುವ ಅನೇಕ ಶಾಸಗಳು ಈ ಸ್ಥಳನಾಮದ ಬಗ್ಗೆ ಮಾಹಿತಿ ನೀಡುತ್ತವೆ. ಅವುಗಳಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ಕ್ರಿ.ಶ. ೯೬೭ರ ಕಾಲದ ಅಹವಮಲ್ಲನ ಶಾಸನ, ಕ್ರಿ.ಶ. ೧೦೯೮ ಮತ್ತು ೧೧೧೯ರ ತ್ರಿಭುವನಮಲ್ಲನ ಶಾಸನಗಳು, ಹೊಯ್ಸಳರ ಕಾಲದ ಕ್ರಿ.ಶ. ೧೨೧೯ರ ವೀರಬಲ್ಲಾಳನ ಶಾಸನ ಮತ್ತು ವಿಜಯನಗರದ ಕ್ರಿ.ಶ. ೧೫೫೪ ಮತ್ತು ೧೫೩೨ರ ಅಚ್ಯುತದೇವರಾಯನ ಶಾಸನಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಇದೇ (ಕೊಟ್ಟಿತೊನೆ> ಕುಡತಿನಿ)ನಾಮವನ್ನು ಉಲ್ಲೇಖಿಸಿವೆ.[೨]

೩. ಕುಡತಿನಿ ಪರಿಸರದಲ್ಲಿ ಜನಪ್ರಿಯವಾಗಿರುವ ಮತ್ತೊಂದು ಐತಿಹ್ಯವೆಂದರೆ ಪ್ರಾಚೀನ ಕಾಲದಲ್ಲಿ ಈ ಪ್ರದೇಶವನ್ನು ಕುಂತಳ ಎಂಬುದಾಗಿ ಕರೆಯುತ್ತಿದ್ದು ಇದನ್ನು ಚಂದ್ರಹಾಸನೆಂಬ ರಾಜನು ಆಳ್ವಿಕೆ ಮಾಡುತ್ತಿದ್ದನು. ಈತನು ಕುರುಗೋಡು ಪ್ರದೇಶವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನು. ಹಾಗಾಗಿ ಈ ಪ್ರದೇಶವು ಕುಂತಳ ರಾಜ್ಯವೆಂದು ಪ್ರಸಿದ್ಧವಾಗಿತ್ತು. ಈತನ ಯುಕ್ತಿ – ಶಕ್ತಿಗಳಿಂದ ಹೆಸರುವಾಸಿಯಾಗಿದ್ದು, ಇದಕ್ಕೆ ಸಾಕ್ಷಿಯಾಗಿ ಗ್ರಾಮದ ಪಶ್ಚಿಮದಲ್ಲಿ ಹರಿಜನ ಬೀದಿಯ ರಸ್ತೆಯ ಪಕ್ಕದಲ್ಲಿ ಈತನ ಪ್ರತಿರೂಪವನ್ನು ಶಿಲ್ಪದಲ್ಲಿ ಕೆತ್ತಿ ದೇವಾಲಯ ನಿರ್ಮಾಣಮಾಡಿರುವುದನ್ನು ಕಾಣಬಹುದು. ಮುಂದೆ ಕಾಲಾನಂತರದಲ್ಲಿ ಕುಂತಳ ಎನ್ನುವ ನಾಮವು ಕುಡತಿನಿಯಾಗಿ ಮಾರ್ಪಟ್ಟಿರಬಹುದು ಎಂಬುದು ಬಲ್ಲವರ ಅಭಿಪ್ರಾಯವಾಗಿದೆ.

ಒಟ್ಟಾರೆಯಾಗಿ ಮೇಲಿನ ಎಲ್ಲಾ ವಿಷಯವನ್ನು ಗಮನಿಸಿದಾಗ ಕುಡತಿನಿ ಗ್ರಾಮದ ಮೂಲ ಹೆಸರು ಕುಳಿತನೋಯೆಂಬ ಅಗ್ರಹಾರವಾಗಿದ್ದು, ರಾಷ್ಟ್ರಕೂಟರಿಂದ ಹಿಡಿದು ವಿಜಯನಗರ ಕಾಲಾವಧಿಯಲ್ಲಿ ಕೊಟ್ಟಿತೊನೆ ನಂತರ ಕುಡತಿನಿ ಎಂದಾಯಿತು ಎಂದು ನಮಗೆ ಸ್ಪಷ್ಟವಾಗುತ್ತದೆ.

## ೨.೩ ಐತಿಹಾಸಿಕ ಹಿನ್ನೆಲೆ

- **ಹಳೆಯ ಶಿಲಾಯುಗ**

ಪ್ರಾಗೈತಿಹಾಸಕಾಲದ ಮಾನವನು ಸಂಪೂರ್ಣವಾಗಿ ಪರಿಸರವನ್ನು ಅವಲಂಬಿಸಿದ್ದನು. ಈ ಪರಿಸರದಲ್ಲಿರುವ ಬೆಟ್ಟ, ಗುಡ್ಡ, ಕಾಡು, ನದಿ, ಮುಂತಾದವುಗಳು ಮಾನವನ ವಾಸಯೋಗ್ಯ ವಾತಾವರಣವನ್ನು ನಿರ್ಮಾಣ ಮಾಡಿದ್ದವು. ಆಹಾರ ಸಂಗ್ರಹಣೆಗಾಗಿ ಆಯುಧಗಳ ತಯಾರಿಕೆಗೆ ಬೇಕಾದ ಶಿಲೆಗಳು ಇಲ್ಲಿನ ಸುತ್ತಮುತ್ತಲಿನ ಬೆಟ್ಟಗಳಲ್ಲಿ ದೊರಕುತ್ತಿದ್ದುದರಿಂದ ಇದು ಪ್ರಾಗೈತಿಹಾಸ ಕಾಲದಿಂದ ಮಾನವನ ಚಟುವಟಿಕೆಗಳ ಕೇಂದ್ರವಾಗಿತ್ತು. ಇಲ್ಲಿನ ಸುತ್ತಮುತ್ತಲಿನ ಸ್ಥಳಗಳಾದ ತಾಮ್ರ ಪರ್ವತ, ಹಳಕುಂಡಿ, ಜೇಡರ ಬೆಳಗಲ್ಲು, ಗಾದಿಗನೂರು, ಜೋಗ, ದರೋಜಿ, ಹಂಪಸಾಗರ, ಬಳ್ಳಾರಿ, ನಿಟ್ಟೂರು ಮುಂತಾದವುಗಳಲ್ಲಿ ಆದಿ ಹಳೆಯ ಶಿಲಾಯಗಕ್ಕೆ ಸಂಬಂಧಿಸಿದ ಅವಶೇಷಗಳು ದೊರೆತಿವೆ.[೮]

- **ಮಧ್ಯ ಶಿಲಾಯುಗ**

ಹಳೆಯ ಶಿಲಾಯುಗ ಮತ್ತು ನವ ಶಿಲಾಯುಗದ ನಡುವಿನ ಕಾಲವನ್ನು ಮಧ್ಯಶಿಲಾಯುಗ ಅಥವಾ ಸೂಕ್ಷ್ಮಶಿಲಾಯುಗವೆಂದು ಕರೆಯಲಾಗುತ್ತದೆ. ಇಲ್ಲಿಯ ಸಂಗನಕಲ್ಲು, ಕುರುಗೋಡು, ಕಪ್ಪುಗಲ್ಲು ಮತ್ತು ಕುಡತಿನಿ ಪ್ರದೇಶಗಳಲ್ಲಿ ಗವಿ ವರ್ಣಚಿತ್ರಗಳು ಕಂಡುಬಂದಿವೆ. ಶಿಲೆಯಲ್ಲಿ ತಯಾರಿಸಿದ ಉಪಕರಣಗಳು ಇವುಗಳ ತಯಾರಿಕೆಗೆ ಬಳಸಿದ ಶಿಲಾಚೂರುಗಳು ದೊರೆತಿವೆ. ಮಾನವನ ಜೀವನದ ಸಾಂಸ್ಕೃತಿಕ ಮುನ್ನಡೆಯಲ್ಲಿ ಈ ಹಂತದ ಪಾತ್ರ ಗಮನಾರ್ಹವಾದುದು. ಈ ಅವಧಿಯಲ್ಲಿ ಬೇಟೆ, ಮೀನುಗಾರಿಕೆ ಇವರ ಕಸುಬಾಗಿದ್ದು, ಆಹಾರ ಸಂಗ್ರಹಣೆಯೇ ಪ್ರಮುಖವಾಗಿತ್ತು. ಈ ಅವಧಿಯ ಉಪಕರಣಗಳು ಅತೀ ಸೂಕ್ಷ್ಮವಾಗಿ ತಯಾರಿಸಲಾಗಿತ್ತು.[೯]

- **ನವಶಿಲಾಯುಗ**

ಮಾನವ ಆಯುಧೋಪಕರಣಗಳನ್ನು ಉಜ್ಜಿ ನಯಗೊಳಿಸಿ ಅದರ ಗಾತ್ರವನ್ನು ಕಡಿಮೆಮಾಡಿ, ಹೆಚ್ಚು ಉಪಯೋಗವಾಗುವಂತೆ ಮಾಡಿಕೊಂಡು ಉಪಯೋಗಿಸಲು ಆರಂಭಿಸಿದ್ದರಿಂದ ಈ ಯುಗವನ್ನು ನವ ಶಿಲಾಯಗವೆಂದು ಕರೆಯಲಾಗಿದೆ. ಈ ಹಂತದಲ್ಲಿ ಆಯುಧಗಳು ತುಂಬಾ ಚಿಕ್ಕದಾಗಿದ್ದು ಹರಿತವಾಗಿದ್ದವು. ಈ ಕಾಲಾವಧಿಯಲ್ಲಿ ಮಾನವನು

ಅಲೆಮಾರಿ ಜೀವನವನ್ನು ಬಿಟ್ಟು ಒಂದೆಡೆ ನೆಲೆಸಿ ಬೇಸಾಯ ಹಾಗೂ ಪಶುಪಾಲನೆಯನ್ನು ಆರಂಭಿಸಿ ಆಹಾರ ಉತ್ಪಾದನೆಯಲ್ಲಿ ತೊಡಗಿ, ನಿಸರ್ಗವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ. ಇದರಿಂದ ಹೊಸ ಹೊಸ ಆಯುಧಗಳ ಸೃಷ್ಟಿಗೆ ಕಾರಣನಾದನು. ಇದರಿಂದ ನಗರೀಕರಣ ಪ್ರಕ್ರಿಯೆ ಈ ಹಂತದಿಂದ ಆರಂಭವಾಯಿತೆಂದು ಹೇಳಬಹುದು.[೧೦]

- **ನವಶಿಲಾಯುಗದ ಬೂದಿದಿಬ್ಬ (ಗುಡ್ಡ)**

ಕುಡತಿನಿ ಪ್ರದೇಶವು ಈ ನವಶಿಲಾಯುಗಕ್ಕೆ ಸಂಬಂಧಿಸಿದ ಅತಿ ಮುಖ್ಯವಾದ ಬೂದಿ ದಿಬ್ಬಗಳು ಕಂಡುಬಂದಿವೆ. ಕಾಲದ ಮಾನವ ಕೃಷಿಯ ಜೊತೆಗೆ ಪಶುಪಾಲನೆಯನ್ನು ಮುಖ್ಯ ಕಸುಬನ್ನಾಗಿಸಿಕೊಂಡಿದ್ದು ಜಾನುವಾರುಗಳಿಂದ್ ಬಂದ ಸೆಗಣಿಯನ್ನು ಇಲ್ಲಿ ಒಂದೆಡೆ ರಾಶಿ ಹಾಕಿ ಸುಟ್ಟಿದ್ದರಿಂದ ಈ ಬೂದಿದಿಬ್ಬಗಳು ನಿರ್ಮಾಣವಾಗಿವೆ. ಈ ಬೂದಿದಿಬ್ಬ ಬಳ್ಳಾರಿಯಿಂದ ೨೫ ಕಿಮೀ ದೂರದಲ್ಲಿದೆ. ಇದನ್ನು ಬೂದಿಕೂಟು, ಬೂದಿಗುಂಟೆ[೧೦] ಎಂದು ಕರೆಯಲಾಗುತ್ತದೆ. ದಿಬ್ಬದ ಪೂರ್ವಕ್ಕಿರುವ ಬಳ್ಳಾರಿ ಗುಡ್ಡ ಹಾಗೂ ಪಶ್ಚಿಮಕ್ಕೆ ೩ ಕಿಮೀ ದೂರದಲ್ಲಿರುವ ತೋರಣಗಲ್ಲು ಗುಡ್ಡದ[೧೦] ಬಳಿ ನವಶಿಲಾಯುಗದ ವಸತಿ ಅವಶೇಷಗಳಿವೆ. ೧೮೪೦ರ ದಶಕದಲ್ಲಿ ನ್ಯೂಬೋಲ್ಟ್ ಈ ದಿಬ್ಬವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ. ಆಗ ದಿಬ್ಬ ೧೦ ಮೀ ಎತ್ತರವಿದ್ದು ೧೨೬ ಮೀ ಸುತ್ತಳತೆಯನ್ನು ಹೊಂದಿತ್ತು. ಇದೇ ಶತಮಾನದ ಕೊನೆಯ ದಶಕಗಳಲ್ಲಿ ಕೋಲ್ ಹಾಗೂ ಬ್ರೂಸ್‌ಪುಟ್ ಇಲ್ಲಿ ಸರ್ವೇಕ್ಷಣೆ ನಡೆಸಿದರು. ಕಲ್ಲಿನ ಕೊಡಲಿ ಮತ್ತು ಅರೆಯುವ ಕಲ್ಲು ಮುಂತಾದ ಅವಶೇಷಗಳನ್ನು ಇಲ್ಲಿಂದ ಸಂಗ್ರಹಿಸಿದರು. ಬ್ರೂಸ್‌ಪುಟ್ ಜಾನುವಾರುಗಳು[೧೧] ಸಗಣಿಯನ್ನು ಇಲ್ಲಿ ರಾಶಿ ಹಾಕಿ ಸುಟ್ಟಿದ್ದರಿಂದ ದಿಬ್ಬ ನಿರ್ಮಾಣಗೊಂಡಿರಬೇಕೆಂದು ತರ್ಕಿಸಿದ. ಅಂತೆಯೇ ಲಾಂಗ್‌ಹರ್ಸ್ಟ್ ೧೯೧೬ರಲ್ಲಿ ಉತ್ಪನನ ಮಾಡಿದ. ಆಗಲೇ ರಸ್ತೆ ನಿರ್ಮಾಣದಿಂದ ದಿಬ್ಬದ ಸಾಕಷ್ಟು ಭಾಗ ನಿರ್ನಾಮವಾಗಿತ್ತು. ೧೯೫೭ರಲ್ಲಿ ಅಲ್ಚಿನ್ ಇಲ್ಲಿ ಸಂಶೋಧನೆ ಕಾರ್ಯ ಆರಂಭಿಸಿದಾಗ ದಿಬ್ಬ ಮತ್ತಷ್ಟು ನಾಶವಾಗಿತ್ತು. ಗೋಲಾಕಾರದಲ್ಲಿದ್ದು ಇದರ ಆಗಿನ ಎತ್ತರ ೫.೪ಮೀ, ವ್ಯಾಸ ೬೫ಮೀ, ಒಟ್ಟು ೧೨ ಪದರಗಳನ್ನು ಗುರುತಿಸಿದ. ಅತ್ಯಂತ ಕೆಳ ಪದರ ಕೆಂಪುಗರಸು ಮಣ್ಣಿನದಾಗಿದ್ದು, ಇದನ್ನು ಉದ್ದೇಶಪೂರ್ವಕವಾಗಿ ನಿರ್ಮಿಸಿದಂತೆ ತೋರುತ್ತದೆ, ೯ ಬೂದಿಯ ಪದರಗಳು ಇಲ್ಲಿದ್ದು, ಇವು ಸಗಣಿ ರಾಶಿಯನ್ನು ಬೇರೆ ಬೇರೆ ಸಂದರ್ಭದಲ್ಲಿ ಸುಟ್ಟಾಗ ಆದಂತಹವು. ಕೆಲವೊಮ್ಮೆ ಸಗಣಿ ಪೂರ್ಣ ದಹಿಸಿದ, ಅನಂತರ ಅದರ ಮೇಲೆ ಮಣ್ಣಿನ ತೆಳ ಪದರ ಹಾಸಿ ಸಮತಟ್ಟು ಮಾಡಲಾಗಿದೆ.

ಕೆಲವೆಡೆ ಸಗಣಿ ಪೂರ್ಣವಾಗಿ ಬೂದಿಯಾಗಿ ಗಾಜಿನ ಕಿಟ್ಟದ (ವೆಟ್ರಿಫಿಕೇಷನ್) ರೂಪ ಪಡೆದುಕೊಂಡಿದೆ, ೧ನೆಯ ಮತ್ತು ೪ನೆಯ ಪದರಗಲ್ಲಿ ನವಶಿಲಾಯುಗದ ಸಾಂಸ್ಕೃತಿಕ ಅವಷೇಶಗಳಿವೆ. ಬೂದು, ಕಂದು, ಕಪ್ಪು, ಕಿತ್ತಾಳೆ ಕಂದುಬಣ್ಣದ ಮಣ್ಣು ಪಾತ್ರೆಗಳು, ಜಾನುವಾರುಗಳ ದವಡೆಕೊಂಬು, ಮೂಳೆಗಳೂ ಈ ಪದರಗಳಲ್ಲಿದ್ದವು. ೧ನೆಯ ಪದರಗಳಲ್ಲಿ ಮೇಲಿನ ಮಣ್ಪಾತ್ರೆಗಳಲ್ಲಿದೆ. ಕಪ್ಪು-ಕಂದು ಬಣ್ಣ ಹಾಗೆ ಕಪ್ಪು ದ್ವಿವರ್ಣಪಾತ್ರೆಯ ಕೆಲವೊಂದು ಚೂರುಗಳಿದ್ದವು. ೨೦೦೨ರಲ್ಲಿ ರವಿ ಕೋರಿಶೆಟ್ಟರ್ ಅವರ ತಂಡ ಇಲ್ಲಿ ಅಗೆದ ಪರೀಕ್ಷಾ ಗುಂಡಿಯಲ್ಲಿ ಅಪರೂಪದ ಅವಶೇಷ ಬೆಳಕಿಗೆ ಬಂದಿತ್ತು. ಒಂದರ ಮೇಲೊಂದಿಟ್ಟ ೩ ಪೂರ್ಣ ಮಡಿಕೆಗಳ ಕೆಳಗೆ ಮಣ್ಣಿನ ಆರು ಕಾಲಿನ ಶವಪಟ್ಟಿಗೆ ಇಲ್ಲಿತ್ತು. ಇದರೊಳಗೆ ೬-೭ ವರ್ಷದ ಮಗುವನ್ನು ಸಮಾಧಿಗೊಳಿಸಲಾಗಿತ್ತು. ಉತ್ತರ ದಕ್ಷಿಣಾಭಿಮುಖವಾಗಿದ್ದು, ಈ ಪೆಟ್ಟಿಗೆಯ ಸುತ್ತಲಿಟ್ಟಿದ್ದ ೧೩ ಸಮಾಧಿಗಳು ನವಶಿಲಾಯುಗದ ಅಂತಿಮ ಹಂತಕ್ಕೆ ಸೇರುತ್ತವೆ. ಈ ಸ್ಥಳವನ್ನು ಸಗಣಿರಾಶಿ ಹಾಕಲು ಏಕೆ ಆಯ್ದುಕೊಂಡರು ಎಂಬುದು ಕುತೂಹಲಕಾರಿ ಅಂಶ. ವರ್ಷಕ್ಕೆ ಎರಡು ಬಾರಿ (ಏಪ್ರಿಲ್ ಹಾಗೂ ಸೆಪ್ಟೆಂಬರ್) ಇಲ್ಲಿಂದ ತೋರಣಗಲ್ಲು ಗುಡ್ಡದ ಹಿಂಭಾಗದಲ್ಲಿ ಸೂರ್ಯ ಮುಳುಗುವುದನ್ನು ಕಾಣಬಹುದು. ಪ್ರಾಯಶಃ ಈ ಸುಂದರ ದೃಶ್ಯವೇ ನೆಲೆಯ ಆಯ್ಕೆಗೆ ಪ್ರೇರಣೆಯಾಗಿದ್ದಿರಬೇಕು.

- **ಬೂದಿದಿಬ್ಬದ ಬಗ್ಗೆ ಇರುವ ಅಭಿಪ್ರಾಯಗಳು**

೧) ಅಲ್ಚಿನ್‌ರವರ ಪ್ರಕಾರ ಈ ಬೂದಿದಿಣ್ಣೆಗಳ ನೆಲೆಗಳು ಮೂಲತಃ ದನ-ಕರುಗಳ ದೊಡ್ಡಿಗಳು. ಇಲ್ಲಿ ಕ್ರಮೇಣ ದೊಡ್ಡ ಪ್ರಮಾಣದಲ್ಲಿ ಸಗಣಿ ರಾಶಿಯನ್ನು ತಮ್ಮ ಸಮಾಜದ ವಿಧಿ-ವಿಧಾನದಂತೆ ಸುಡಲಾಗುತ್ತಿತ್ತು. ಮತ್ತೆ ಅದೇ ಸ್ಥಳದಲ್ಲಿ ದೊಡ್ಡಿಯನ್ನು ಕಟ್ಟಿ ಸಗಣಿ ಸಂಗ್ರಹಕ್ಕೆ ಎಡೆಮಾಡುತ್ತಿದ್ದರು. ಅದನ್ನು ಮತ್ತೆ ಸುಡಲಾಗುತ್ತಿತ್ತು. ಈ ದಹನ ಕ್ರಿಯೆ ಅತಿ ನಿಧಾನವಾಗಿ ಒಳಗೊಳಗೆ ನಡೆಯುತ್ತಿದ್ದರಿಂದ ಕ್ರಮೇಣ ಅಲ್ಲಿ ಬೂದಿ ಕಿಟ್ಟದ ಎರಡು, ಮೂರು ಪದರುಗಳು ರಚನೆಯಾಗುತ್ತಿದ್ದವು.

೨) ರಾಮಿರೆಡ್ಡಿರವರ ಪ್ರಕಾರ ಈ ಬೂದಿದಿಣ್ಣೆಗಳು ಮೂಲದಲ್ಲಿ ಕಬ್ಬಿಣದ ಅದಿರನ್ನು ಸಂಗ್ರಹಿಸಿ ಲೋಹ ಮಾಡುವುದಕ್ಕಾಗಿ ಸುಟ್ಟಿದ್ದರಿಂದ ಉಂಟಾದವು.

೩) ಮಜುಂದಾರ ಮತ್ತು ರಾಜಗುರು[೧೩] ಅವರ ಪ್ರಕಾರ ಇವು ಮೂಲತಃ ದೊಡ್ಡಿಗಳಲ್ಲ. ದೊಡ್ಡಿಗಳಿಂದ ಸಗಣಿಯನ್ನು ಸಂಗ್ರಹಿಸಿ ಬೇರೆಡೆಯಲ್ಲಿ ಒಟ್ಟುತ್ತಿದ್ದರು. ಅಂತಹ ಒಟ್ಟಿನ ನೆಲೆಗಳು ಇವು.

೪) ಪದ್ದಯ್ಯನವರ ಪ್ರಕಾರ ದೊಡ್ಡಿ ಮತ್ತು ಸೆಗಣೆ ಒಟ್ಟಿದ ನೆಲೆಗಳು ಬೇರೆ-ಬೇರೆಯಾಗಿದ್ದರೂ ಒಂದುಕ್ಕೊಂದು ಹತ್ತಿರದಲ್ಲಿಯೇ ಇದ್ದವು. ಆಗಿನ ಕಾಲದಲ್ಲಿ ಕೃಷಿಗೆ ಸಗಣೆಗೊಬ್ಬರವನ್ನು ಉಪಯೋಗಿಸುತ್ತಿದ್ದಕ್ಕೆ ಪುರಾವೆಗಳಿಲ್ಲ. ಒಂದು ವೇಳೆ ಉಪಯೋಗಿಸಿದ್ದರೂ ಅದರ ಪ್ರಮಾಣ ಕಡಿಮೆ. ಆ ಜನರು ತಕ್ಕ ಮಟ್ಟಿಗೆ ದೊಡ್ಡ ಪ್ರಮಾಣದಲ್ಲಿ ದನ-ಕರುಗಳನ್ನು ಸಾಕುತ್ತಿದುದ್ದರಿಂದ ಸಗಣಿಯ ಪ್ರಮಾಣ ಹೆಚ್ಚಾಗಿರುತ್ತಿತ್ತು. ಆದ್ದರಿಂದ ಉಪಯೋಗವಾಗದ ಸಗಣಿಯನ್ನು ಈ ರೀತಿ ಅಗಾಗ್ಗೆ ಸುಡಲಾಗುತ್ತಿತ್ತು. ಇದರ ಬೆಂಕಿಯು ದಿನಗಟ್ಟಲೆ ಇದ್ದುದರಿಂದ ಸಾಕಿದ ಪ್ರಾಣಿಗಳು ಹಾಗೂ ಮನುಷ್ಯರನ್ನು ಹಿಡಿಯಲು ಬರುತ್ತಿದ್ದ ಕಾಡು ಪ್ರಾಣಿಗಳನ್ನು ದೂರವಿಡಲು ಇದು ಒಂದು ಕ್ರಮವಾಗಿತ್ತು.

೫) ಅ.ಸುಂದರ ಅವರ ಪ್ರಕಾರ ಬಹಳ ಹಿಂದಿನಕಾಲದಲ್ಲಿ ಸುಡುವ ವಿಧಾನದಿಂದ ಶವ ಸಂಸ್ಕಾರ ಮಾಡುತ್ತಿದ್ದ ಜನ ವರ್ಗಗಳ ಪ್ರಸಿದ್ಧ ಶೂರರ ನೆನಪಿನಲ್ಲಿ ಅಗಾಗ್ಗೆ ಇಂಥ ದೊಡ್ಡ ಪ್ರಮಾಣದ ಸಗಣಿಯನ್ನು ಸುಡುವ ಆಚರಣೆ ಇದ್ದಿರಬೇಕು. ಕುಡತಿನಿ ಸಮೀಪದ ಬೂದಿ ಗುಡ್ಡೆಯು ಮಹಾಭಾರತದ ಹಿಡಿಂಬಾಸುರನನ್ನು ಸುಟ್ಟಿದ್ದರಿಂದಾಗಿಯೇ ಉಂಟಾಯಿತೆಂದು ಸ್ಥಳೀಯ ಹೇಳಿಕೆ.

ಹೀಗೆ ಬೂದಿದಿಣ್ಣೆಗಳ ಬಗ್ಗೆ ವಿಭಿನ್ನ ಅಭಿಪ್ರಾಯಗಳಿವೆ. ಆದರೆ ಇವು ಕಂಡುಬಂದಿರುವ ಭೌಗೋಳಿಕ ಪರಿಸರವನ್ನು ಗಮನಿಸಿದರೆ ಬಳ್ಳಾರಿ, ರಾಯಚೂರು, ಗುಲ್ಬರ್ಗ, ಆಂಧ್ರಭಾಗದಲ್ಲಿ ಕಾಡು, ಬೆಟ್ಟ ಶಿಲೆಗಳಿಂದ ಆವೃತ್ತಗೊಂಡ ಈ ಪ್ರದೇಶದಲ್ಲಿ ಒಂದು ಕಾಲದಲ್ಲಿ ಕೃಷಿಗೆ ಯೋಗ್ಯವಾದ ಭೂಮಿ ಇರಲಿಲ್ಲವೆಂದು ತೋರುತ್ತದೆ. ಬಹಳ ಪ್ರಯತ್ನದ ಮೂಲಕ ಅದನ್ನು ಬಳಕೆ ಮಾಡಿಕೊಳ್ಳಬೇಕಾಗುತ್ತಿತ್ತು. ಇದರಿಂದ ಇಲ್ಲಿಯ ಜನವರ್ಗ ಪಶುಪಾಲನೆ ವೃತ್ತಿಯನ್ನು ಅವಲಂಬಿಸಿದಂತೆ ಕಾಣುತ್ತದೆ. ಈ ಬೆಟ್ಟ ಕಾಡುಗಳಲ್ಲಿ ಸುಮಾರು ದಿನಗಳ ಕಾಲ ವಾಸಮಾಡುತ್ತಾ ದೊಡ್ಡಿಗಳನ್ನು ಕಟ್ಟಿ ದನಗಳನ್ನು ಸಾಕಿರಬೇಕು. ಪ್ರತಿದಿನ ಸಂಗ್ರಹವಾಗುವ ಸಗಣಿಯನ್ನು ಪಕ್ಕದಲ್ಲಿ ಹಾಕಿ ನಿರಂತರವಾಗಿ ಅದರ ಮೇಲೆ ಚಲನವಲನಗಳು ನಡೆದು ಗಟ್ಟಿಗೊಳ್ಳುತ್ತಿತ್ತು. ನಂತರ ಈ ಸ್ಥಳವನ್ನು ಬಿಟ್ಟು ಹೋಗುವಾಗ ಬೆಂಕಿ ಹಚ್ಚುತ್ತಿದ್ದಂತೆ ಕಾಣತ್ತದೆ. ದನಗಾಹಿಗಳು ಒಂದು ಪ್ರದೇಶದಿಂದ ಬೇರೆ ಹುಲ್ಲುಗಾವಲು ಪ್ರದೇಶವನ್ನು ಅರಸುತ್ತಾ ಹೋಗುವುದು ಸ್ವಾಭಾವಿಕ. ಇದು ನಿಧಾನವಾಗಿ ಸುಟ್ಟಿದ್ದರಿಂದ ಬೂದಿ ಉಂಡೆಗಳು ಉಂಟಾಗಿರಬೇಕು.

ಸಾಂಪ್ರದಾಯಿಕ ಆಚರಣೆ ಮತ್ತು (ಬೋವಿ ಜನಾಂಗ ಉತ್ಸವ) ಸಂದರ್ಭದಲ್ಲಿ ಒಣಗಿದ ಸಗಣಿಯ ಹರ ಮಡಿಕೊಂಡು ಕೊನೆಗೆ ಬೆಂಕಿಗೆ ಹಾಕುತ್ತಿದ್ದರು. ಈ ರೀತಿ ಹಾಕಿದ ಸಗಣಿ ಮತ್ತು

ಕಸದರಾಶಿಗೆ ಬೆಂಕಿ–ಹಚ್ಚಲಾಗುತ್ತಿತ್ತು. ಇದರಿಂದ ಇಂತಹ ಗುಡ್ಡಗಳ ನಿರ್ಮಾಣವಾಗಿವೆ. ಬಳ್ಳಾರಿ (ಜಿಲ್ಲೆ) ಸಂಗನಕಲ್ಲು, ಕುರುಗೋಡು, ತೋರಣಗಲ್ಲು, ಗಾದಿಗನೂರು, ಕುರೆಕೊಪ್ಪ, ಹಲಕುಂದಿ ಮತ್ತಿತರದ ಈ ರೀತಿಯ ಗುಡ್ಡಗಳಿವೆ. ಬಳ್ಳಾರಿ, ಚಿತ್ರದುರ್ಗ, ರಾಯಚೂರು, ಕಲಬುರ್ಗಿ ಜಿಲ್ಲೆಗಳಲ್ಲಿರುವ ಬೂದಿಗುಡ್ಡಗಳಲ್ಲಿ ಬಿ.ಟಿ.ಪಿ.ಎಸ್ ಬಳಿ ಇರುವ ಬೂದಿಗುಡ್ಡ ದೊಡ್ಡದಾಗಿದೆ. ಪ್ರಪಂಚದ ಪ್ರಾಚ್ಯವಸ್ತು ತಜ್ಞರು ವಿಶೇಷವಾಗಿ ಭಾರತದಲ್ಲಿ ಕೃಷಿ ಪದ್ಧತಿ ಹೇಗೆ ಆರಂಭವಾಯಿತು ಎಂಬುದರ ಬಗ್ಗೆ ಸಂಶೋಧನೆ ನಡೆಸಲು ಇಲ್ಲಿಗೆ ಭೇಟಿ ನೀಡಿದ್ದಾರೆ. ಅಭಿವೃದ್ಧಿ ಚಟುವಟಿಕೆಗಳಿಂದ ಈ ಮಹತ್ವದ ಸ್ಥಳವು ಧಕ್ಕೆಯಾಗಬಾರದೆಂಬ ಉದ್ದೇಶದಿಂದ ಐ.ಎ.ಎಸ್. ಅಧಿಕಾರಿ ಎಸ್ ಎಂ ಜಮದಾರ್ ೪೦ ವರ್ಷಗಳ ಹಿಂದೆ ರಕ್ಷಣಾಗೋಡೆ ನಿರ್ಮಾಣಕ್ಕೆ ಕ್ರಮಕೈಗೊಂಡಿದ್ದರು. ರಸ್ತೆ ವಿಸ್ತರಣೆಯಿಂದ ಬೂದಿಗುಡ್ಡದ ಉತ್ತರ ಭಾಗಕ್ಕೆ ಧಕ್ಕೆಯಾಗಿದೆ. ಬಿ.ಟಿ.ಪಿ.ಎಸ್ ವಿಸ್ತರಣೆಯಿಂದ ಕೂಡ ಐತಿಹಾಸಿಕ ಸ್ಥಳ ನಾಶವಾಗುವ ಭೀತಿ ಎದುರಾಗಿದೆ.[೧೧]

ಈ ಪ್ರದೇಶದಲ್ಲಿ ಕೈಗೊಂಡ ಅನ್ವೇಷಣೆ ಮತ್ತು ಉತ್ಖನನಗಳಲ್ಲಿ ದೊರೆತ ಪ್ರಾಗೈತಿಹಾಸಕಾಲದ ಅವಶೇಷಗಳಿಂದ ಆದಿ ಮಾನವನ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಬೂದಿ ದಿಬ್ಬಗಳ ಪಾತ್ರ ಗಮನಾರ್ಹವಾದುದು.

- **ತಾಮ್ರಶಿಲಾಯುಗ**

ಮಾನವನ ಸಾಂಸ್ಕೃತಿಕ ವಿಕಾಸ ಒಂದು ಘಟ್ಟ. ಉಪಕರಣ ತಯಾರಿಕೆಯಲ್ಲಿ ತಾಮ್ರವೇ ಪ್ರಧಾನವಾಗಿದ್ದರಿಂದ ಈ ಕಾಲದ ಸಂಸ್ಕೃತಿಯನ್ನು ತಾಮ್ರಯುಗ ಸಂಸ್ಕೃತಿ ಎಂದೂ ಹೇಳಬಹುದು. ಆದರೆ ಈ ಖಚಿತ ಅರ್ಥದಲ್ಲಿ ಶುದ್ಧ ತಾಮ್ರಯುಗ ಸಂಸ್ಕೃತಿ ಪ್ರಪಂಚದ ಯಾವುದೇ ಭಾಗದಲ್ಲಿ ಎಂದಿಗೂ ಇದ್ದಂತೆ ಕಂಡುಬರುವುದಿಲ್ಲ. ಬೇರೆ ಬೇರೆ ದೇಶಗಳಲ್ಲಿ, ಈ ಸಂಸ್ಕೃತಿಯವ ಅವಶೇಷಗಳು ಬೇರೆ ಬೇರೆ ಕಾಲಾವಧಿಯಲ್ಲಿ ಕಂಡುಬಂದಿವೆ.

ಶಿಲಾಯುಗದ ಅಂತ್ಯಕಾಲದಲ್ಲಿ ನೈಸರ್ಗಿಕವಾಗಿ ದೊರಕುತ್ತಿದ್ದ ತಾಮ್ರವನ್ನು ಬಡಿದು ತಯಾರಿಸಿದ ವಸ್ತುಗಳು ಕಾಣಬರುತ್ತವೆ. ಆದರೆ ಈ ನೈಸರ್ಗಿಕ ತಾಮ್ರ ತುಂಬಾ ಮೃದುವಾಗಿದ್ದರಿಂದ, ವಿರಳವಾಗಿದ್ದರಿಂದ ಕಲ್ಲಿನ ಉಪಕರಣಗಳ ಬಳಕೆ ಮುಂದುವರಿಯಿತು. ಈ ಕಾಲಾವಧಿಗೆ ಸೇರಿದ ನಿವೇಶನಗಳು ಬಳ್ಳಾರಿ ತಾಲ್ಲೂಕಿನ ಕುಡತಿನಿ, ಕಪ್ಪಗಲ್, ಕುರುಗೋಡು, ಸಂಗನಕಲ್ಲುಗಳಲ್ಲಿ ಕಂಡುಬಂದಿವೆ.[೧೨]

• **ಕಬ್ಬಿಣ ಯುಗ / ಬೃಹತ್ ಶಿಲಾಯುಗ**

ಶಿಲಾ–ತಾಮ್ರಯುಗದ ಸಂಸ್ಕೃತಿಯ ನಂತರ ಈ ಪ್ರದೇಶದಲ್ಲಿ ಕಬ್ಬಿಣಯುಗ ಸಂಸ್ಕೃತಿಯ ಅವಶೇಷಗಳು ಕಂಡುಬರುತ್ತವೆ. ಈ ಕಾಲದಲ್ಲಿ ಮಾನವನು ಮೊದಲ ಬಾರಿಗೆ ಕಬ್ಬಿಣದ ಉಪಯೋಗವನ್ನು ಕಂಡುಕೊಂಡನು. ಕಬ್ಬಿಣದ ಆಯುಧಗಳನ್ನು ಬಳಸಿರುವುದರಿಂದ ಈ ಕಾಲದ ಸಂಸ್ಕೃತಿಯನ್ನು ಕಬ್ಬಿಣಯುಗ ಎಂದು ಕರೆಯಲಾಯಿತು. ಈ ಭಾಗವು ಪ್ರಾಕ್ ಶಾಸ್ತ್ರಜ್ಞರ ಪ್ರಕಾರ ಲೋಹಯುಗದ ಸಂಸ್ಕೃತಿಯ ತಾಣವಾಗಿತ್ತು. ಈ ಲೋಹ ಸಂಸ್ಕೃತಿಯು ಕ್ರಿ.ಪೂ.೧೨೦೦ ರಿಂದ ೨೦೦ರವರೆಗೆ ಅಸ್ತಿತ್ವದಲ್ಲಿತ್ತು ಎಂಬುದು ಸಂಶೋಧಕರ ಅನಿಸಿಕೆ. ಅದರಲ್ಲೂ ಮುಖ್ಯವಾಗಿ ಕಾರ್ತಿಕೇಯವನದ ಪರಿಸರವು ಕ್ರಿ.ಪೂ.೯೦೦ ರಿಂದ ೫೦೦ರ ಅವಧಿಯಲ್ಲಿ ಕಬ್ಬಿಣದ ಕಾರ್ಯಾಗಾರಕ್ಕೆ ಪ್ರಸಿದ್ಧಿಯನ್ನು ಪಡೆದಿತ್ತು. ಈ ಅವಧಿಯಲ್ಲಿ ದೊರೆತ ಕಬ್ಬಿಣದ ಉಪಕರಣಗಳನ್ನು ವೈಜ್ಞಾನಿಕ ಅಧ್ಯಯನಕ್ಕೆ ಒಳಪಡಿಸಿ, ಅದರಿಂದ ತಿಳಿದುಬಂದ ಸಂಗತಿಯಿಂದ ಈ ಉಪಕರಣಗಳನ್ನು ಪ್ರದೇಶದ ಕಬ್ಬಿಣದ ಅದಿರನ್ನು ಸಂಗ್ರಹಿಸಿ ಮತ್ತು ಸಂಸ್ಕರಿಸಿ ಮಾಡಿದ ಕಬ್ಬಿಣದ ಲೋಹದಿಂದ ಮಾಡಿದವುಗಳಾಗಿವೆ ಎಂಬ ಸತ್ಯಾಂಶವನ್ನು ಶೋಧಕರು ಶೋಧಿಸಿದ್ದಾರೆ. ಈ ಅವಧಿಯಲ್ಲಿ ನೆಲೆಸಿದ್ದ ಜನವಸತಿಯಲ್ಲಿ ಒಂದು ಗುಂಪಿನವರು ಕುಮಾರಸ್ವಾಮಿಯ ಬೆಟ್ಟ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪವನ್ನು ಗುರುತಿಸಿ ಮತ್ತು ಸಂಗ್ರಹಿಸಿ ಈ ಲೋಹದ ನಾನಾ ಪ್ರಕಾರದ ಉಪಕರಣಗಳನ್ನು ಮತ್ತು ಶಸ್ತ್ರಗಳನ್ನು ತಯಾರಿಸುವಲ್ಲಿ ಸಿದ್ಧಹಸ್ತರಾಗಿದ್ದರೆಂದು ಹೇಳಲು ದೊರೆತ ವರ್ಣಚಿತ್ರಗಳು ಸಾಕ್ಷಿಯಾಗಿವೆ.[೧೩]

**೨.೪ ಇತಿಹಾಸ ಕಾಲ**

ಕುಡತಿನಿ ಪ್ರದೇಶದ ಹಿನ್ನೆಲೆಯು ಅತ್ಯಂತ ಪುರಾತನವಾದುದು. ಕ್ರಿ.ಪೂ. ಮೂರನೆಯ ಶತಮಾನದಿಂದ ಮೌರ್ಯರು ರಾಜ್ಯಾಳ್ವಿಕೆಯನ್ನು ಆರಂಭಿಸುತ್ತಾರೆ. ಆ ಕಾಲಕ್ಕೆ ಬಳ್ಳಾರಿ (ಜಿ) ಸಿರುಗುಪ್ಪ ಪ್ರಮುಖ ರಾಜಕೀಯ ಕೇಂದ್ರವಾಗಿತ್ತು. ಇವರ ಶಾಸನಗಳು ಬ್ರಹ್ಮಗಿರಿ, ಮಸ್ಕಿ, ಕೊಪ್ಪಳ, ಉಡೇಗೊಳಂ, ನಿಟ್ಟೂರಿನಲ್ಲಿ ದೊರೆತಿರುವುದರಿಂದ ಕುಡತಿನಿಗೆ (ಬಳ್ಳಾರಿ) ಸಮಿಪದಲ್ಲಿರುವುದರಿಂದ ಈ ಪ್ರದೇಶ ಪೂರ್ಣವಾಗಿ ಅವರ ಆಳ್ವಿಕೆಗೆ ಒಳಪಟ್ಟಿತ್ತು. ಅಶೋಕ ಚಕ್ರವರ್ತಿಯ ಬಿರುದು ಜೀವನ ಮತ್ತು ಸಾಧನೆಗಳನ್ನು ಈ ಶಾಸನಗಳು ತಿಳಿಸುತ್ತವೆ.

ಶಾತವಾಹನರು ಕ್ರಿ.ಪೂ. ೨೨೦ರಿಂದ ಕ್ರಿ.ಶ. ೨೩೦ರವರೆಗೆ ಆಳ್ವಿಕೆ ನಡೆಸುತ್ತಾರೆ. ಇವರು ಆಂಧ್ರ ಮತ್ತು ಕರ್ನಾಟರೆಂಬ ಪರಸ್ಪರ ವಿವಾದಗಳಿವೆ. ಇವರಿಗೆ ಆಂಧ್ರಬೃತ್ಯರೆಂದು ಕರೆಯಲಾಗಿದೆ. ಒಟ್ಟಾರೆ ಬಳ್ಳಾರಿಯ ಕುಡತಿನಿ ಇವರ ಆಳ್ವಿಕೆಗೆ ಒಳಪಟ್ಟಿತ್ತು. ತಾಮ್ರ ಶಾಸನಗಳಲ್ಲಿ ಶಾತವಾಹನಿಹರ ಎಂಬ ಉಲ್ಲೆಖಗಳಿವೆ. ಸ್ಥಳೀಯ ಪ್ರಭುಗಳಲ್ಲದೆ ಈ ಪ್ರದೇಶವು ಉತ್ತರ ಭಾರತದ ಮಹಾಸಾಮ್ರಾಟರ ಆಳ್ವಿಕೆಗೂ ತುತ್ತಾಗಿತ್ತು. ಗುಪ್ತರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತ್ತು. ಬಳ್ಳಾರಿ ಸಮೀಪದ (ಕ್ರಿ.ಶ. ೩೪೦) ಕಂಚಿಯ ವಿಷ್ಣುಗೋಪನನ್ನು ದಕ್ಷಿಣ ದಂಡಯಾತ್ರೆಯಲ್ಲಿ ಸೋಲಿಸಿದ ಸಂಗತಿ ಅಲಹಾಬಾದ್ ಶಾಸನದಲ್ಲಿದೆ.

ಬನವಾಸಿ ಕದಂಬರು ಹುಚ್ಚಂಗಿ ದುರ್ಗದವರೆಗೂ ರಾಜ್ಯ ವಿಸ್ತರಿಸಿದರು. ಕ್ರಿ.ಶ. ೬ನೆಯ ಶತಮಾನದಲ್ಲಿ ಬಾದಾಮಿ ಚಾಲುಕ್ಯರು ಕದಂಬರನ್ನು ಸೋಲಿಸುವುದರ ಮೂಲಕ ಸುತ್ತಮುತ್ತಲಿನ ಪ್ರದೇಶಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದವು. ಗಂಗರಸನಾದ ದುರ್ವಿನೀತನು ಬಳ್ಳಾರಿ ಪ್ರದೇಶವನ್ನು ಒಳಗೊಂಡಂತೆ ರಾಜ್ಯ ವಿಸ್ತರಿಸಿದನು. ಬಾದಾಮಿ ಚಾಲ್ಯುಕರ ಕಾಲಕ್ಕೆ ಅಭಿವೃದ್ಧಿ ಪಥದಲ್ಲಿ ಬಳ್ಳಾರಿ ಪ್ರದೇಶವನ್ನು ೧ನೆಯ ಕೀರ್ತಿವರ್ಮ, ಎರಡನೆಯ ಪುಲಿಕೇಶಿ ಮತ್ತು ಆತನ ಮಕ್ಕಳು ಸಾಕಷ್ಟು ಸುಧಾರಣೆಗೊಳಿಸಿದ್ದು ಸ್ಮರಣೀಯ.

ಕುಡತಿನಿಯನ್ನು ಬೊಮ್ಮತ ರಾಜನ ಮಗ ಹಿರೆ ಬೊಮ್ಮತ ರಾಜನು ನೇಮಕವಾಗಿ ಆಳ್ವಿಕೆ ನಡೆಸುತ್ತಾನೆ. ಮಧ್ಯಕಾಲದಲ್ಲಿ ಕುಡತಿನಿ ಪ್ರದೇಶ ಭೌಗೋಳಿಕ ಲಕ್ಷಣ ಮತ್ತು ಸರಹದ್ದು (ಚಕ್ಕಬಂದಿ) ಈ ರೀತಿ ಇತ್ತು. ಕುಡಿತಿನಿಯ ಇಂದ್ರದಿಕ್ಕಿಗೆ ಕೊಳಗಲ್ಲು (ತಳವಾರ ಮಟ್ಟಿ), ಆಗ್ನೇಯಕ್ಕೆ ಬೆಳಗಲ್ಲು, ಯಮಕ್ಕೆ ಬಾಣರಾವಿ, ನೈರುತ್ಯಕ್ಕೆ ಯರಭಾಹಳ್ಳಿ, ಹೊಲಮೇರಿ ಮಕ್ಕದ ಕುಂಟೆ ಇದೆ. ವಾಯುವ್ಯಕ್ಕೆ ಸುಗ್ಗನಹಳ್ಳಿ, ನಾಲಾಪುರ, ಕುಡಿತಿನಿ ಮುಗಿದಿ ಹಿಂದಿ ಹೂಲಮೇರಿ ಕುಬೇರ ದಿಕ್ಕಿಗೆ ಕುರುಗೋಡು, ಈಶಾನ್ಯಕ್ಕೆ ಕೋಳೂರು ಹೊಲಬು, ಅಷ್ಟದಿಕ್ಕುಗಳು ಕುಡತಿನಿಯ ಹೊಲಬುಗಳಾಗಿದ್ದವು.

ಕುಡತಿನಿಯ ಸೀಮೆಬಾಳಗಿನ ನಾಡಗೌಡಕಿ, ನಾಡ ಕುಲಕರ್ಣಿ, ದೇಶಾಯಿದೆ ಸರನಾಡ ಗೌಡರಿಗೆ, ಉಂಬಳಿಯಾಗಿ ಮುಜಾಪುರ, ವೆಂಕಪುರ ಕಾವಲ ದೋಣಿಗಳನ್ನು ಕೊಟ್ಟಿರುವ ಬಗ್ಗೆ ತಿಳಿದು ಬರುತ್ತದೆ. ದರೋಜಿ ಸೀಮೆಯಲ್ಲಿ ಜಮದಾರಿಕೆಗೆ ಸೋಮಲಾಪುರ, ವಡ್ಡು, ನಾಗಲಾಪುರ ಇಂಗಳಿಗಿ, ಭಾಣರಾವಿ, ಸಂಡೂರು, ಬಸಪುರ, ಚೂರಮನೂರು, ಅಂಕಮನಾಳು, ಹಿಲೆಹಾಳಿಗಿ ಮತ್ತು ಮತ್ಪನನ ಹಳ್ಳಿ ಎಂಬವುಗಳಿದ್ದವು. ನಾಡತಳವಾರಿಕಿ ಮೂಲಕ ಹೀರೆ ಬೊಮ್ಮತ ರಾಜ ಆಳ್ವಿಕೆಯಲ್ಲಿರುವಾಗ ದ್ಯಾವಪ್ಪನಾಯಕನ ಯಂಕಪ್ಪನನ್ನು ಕೂಡಿಹಾಕಿದ ನಂತರ ಬಿಡುಗಡೆ

ಮಾಡಿದರು. ಯಂಕಪ್ಪನ ಸ್ಥಳ ಬೆಟ್ಟ ಕುಡತಿನಿ. ಗುಡೆಕೋಟೆ ಸಂಸ್ಥಾನಿಕರ ಕೆಳಗೆ ಇದ್ದುದರಿಂದ ಅಲ್ಲಿಗೆ ಸೇರಿ ತನ್ನ ಹೆಂಡರು ಮಕ್ಕಳು ಸಹಾ ಸಂಗಡ ಕರೆದು ಕೊಂಡು ಕುಡತಿನಿ ಕಿಲ್ಲೆದಾರಿ ಮಾಡಿಕೊಂಡು ಇರಲಾಗಿ ಕುರುಗೋಡು ವರಗುಣೆಯಲ್ಲಿ ಈತನ ಅಣ್ಣ, ತಮ್ಮರು ಇದ್ದರು. ಹೀಗಿರುವಾಗ ಕುರುಬರಲ್ಲಿ ಮುಖಸ್ಥರು ಅರೀಕೆರಿಗೆ ಕೆಲವು ಮಂದಿ ಸೇರಿ ಮಹಾರಾಯನ ಕಡೆ ಕುಡತಿನಿಗೆ ಬಂದು ಸೇರಿದರು. ಕ್ರಿ.ಶ. ೮ನೆಯ ಶತಮಾನದಲ್ಲಿ ರಾಷ್ಟ್ರಕೂಟರು ಚಾಲ್ಯುಕರಿಂದ ಈ ಪ್ರದೇಶವನ್ನು ಧಕ್ಕಿಸಿಕೊಂಡು ಹಗರಿಯವರೆಗೂ ಗಡಿಯನ್ನು ವಿಸ್ತರಿಸಿದರು. ೩ನೇ ಕೃಷ್ಣ ಇತರ ಅರಸರು ಧಕ್ಕಿಸಿದ ಎಂದು ಕುಡತಿನಿ ಸಂಡೂರು ಶಾಸನ ತಿಳಿಪಡಿಸುವುದು ಗಮನಾರ್ಹವಾಗಿವೆ. ಮುಮ್ಮಡಿ ಗೋವಿಂದನು ಗಂಗ ಪಲ್ಲವ ಪಾಂಡವರನ್ನು ಸೋಲಿಸಿ ಕೇರಳವನ್ನು ಜಯಿಸಿದನು. ಇವರ ಕಾಲದಲ್ಲಿ ಕುಡತಿನಿ[೧೫] ಕುರುಗೋಡು ಕಂಪ್ಲಿ ಪ್ರದೇಶಗಳು ಆಳ್ವಿಕೆಗೆ ಒಳಪಟ್ಟಿದ್ದವು.

ಬಳ್ಳಾರಿಯ (ಕುಡತಿನಿ) ಸಮೀಪದ ವಿಜಯನಗರವು ಸ್ಥಾಪನೆಯಾಗಿದ್ದು (೧೩೩೬) ಸ್ಮರಣೀಯ. ಹರಿಹರ, ಬುಕ್ಕ, ಪ್ರೌಢ ದೇವರಾಯ, ಸಾಳುವ ನರಸಿಂಹ, ಕೃಷ್ಣದೇವರಾಯ ಮೊದಲಾದ ಅರಸರುಗಳಿಂದ ಅನೇಕ ರೀತಿಯ ಅಭಿವೃದ್ಧಿಯ ಕಾರ್ಯಗಳಾಗಿದ್ದವು. ಕೃಷ್ಣದೇವರಾಯನ ಕಾಲದಲ್ಲಿ ಸುವ್ಯವಸ್ಥಿತ ಆಳ್ವಿಕೆಗೆ ಒಳಪಟ್ಟಿತ್ತು. ಈ ವಂಶದ ಕೊನೆಯ ಅರಸರಿಂದ ಬಿಜಾಪುರದ ೧ನೇ ಅಲಿ ಆದಿಲ್ ಷಾ ೧೫೬೮ರಲ್ಲಿ ರಾಜ್ಯವನ್ನು ಪಡೆದುಕೊಂಡನು. ಈ ಮೊದಲು ರಾಯಚೂರಿನ ಫಲವತ್ತಾದ (ದೋ ಆಬ್) ಪ್ರದೇಶಕ್ಕಾಗಿ ಬಹುಮನಿ ಅರಸರಿಗೂ ಮತ್ತು ವಿಜಯನಗರದ ಅರಸರಿಗೂ ಕದನಗಳಾಗಿದ್ದವು. ಈ ಸಂದರ್ಭದಲ್ಲಿ ಕುಡತಿನಿ ಪಾಳೆಯಗಾರರು ಆಳ್ವಿಕೆಯನ್ನು ನಡೆಸಿದರು.

ವಿಜಯನಗರದ ಪತನದ ನಂತರ ಪಾಳೆಯಗಾರರ ಆಳ್ವಿಕೆ ಪ್ರಬಲವಾಗುತ್ತದೆ. ಕುಡತಿನಿಯಲ್ಲಿ ಕಂಪಲಿರಾಯನ ಮಗ ಕುಮಾರರಾಮನ ಸಂತತಿಗೆ ಸೇರಿದ ಮರುಳನವರು ನಾಡ ತಳವಾರಿಕೆಯನ್ನು ಮಾಡಿಕೊಂಡು ಬಂದಿದ್ದ ಬೊಮ್ಮತ ರಾಜನು ಇಲ್ಲಿ ಕೋಟೆ-ಕೊತ್ತಲು, ಕಿಲ್ಲೆಗಳನ್ನು ಕಟ್ಟಿ ರಾಜ್ಯ ಆಳ್ವಿಕೆ ಮಾಡಿದ್ದನು. ಇವನ ನಂತರ ಈ ಪ್ರದೇಶಗಳು ಇವನ ಏಳು ಮಕ್ಕಳ ಆಳ್ವಿಕೆಗೆ ಒಳಪಟ್ಟಿದ್ದು ಕುಡತಿನಿ ವಡ್ಡು, ದರೋಜಿ, ಜರಿಮಲೆ, ಬಾಂಡಾವಿ, ಗುಡೆಕೋಟೆ, ಉಜ್ಜಿನಿಗಳಾಗಿದ್ದವು.

ಕಂಪಲಿರಾಯನ ಮಗ ಕುಮಾರರಾಮ ದಳವಾರ ಮರಳಿ ಭೂಮರಾಜನು ಕೃಷ್ಣರಾಯರಿಗೆ ಭಿನ್ನ ಮಾಡಿಕೊಂಡಂತೆ(ಕುಡತಿನಿ) ಹಿರೆಬೊಮ್ಮತ ರಾಜನಿಗೆ ಜಹಗೀರು ಕೊಡುತ್ತಾನೆ. ಅಂದಿನಿಂದ ಹಿರೆ ಬೊಮ್ಮಂತ ರಾಜ ಕೋಟೆ ಕೊತ್ತಲುಗಳನ್ನು ಕಟ್ಟಿಸಿ ಆಳ್ವಿಕೆಗೆ ನಡೆಸುತ್ತಾನೆ. ಈ ವಂಶ

ಪರಂಪರೆ ಸುಮಾರು ಎರಡು ಶತಮಾನಗಳ ಕಾಲ ಆಳ್ವಿಕೆ ನಡೆಸುತ್ತಿರುವಾಗಲೆ ಬ್ರಿಟಿಷರ ಆಡಳಿತ ಆರಂಭವಾಗುತ್ತದೆ. ಬ್ರಿಟಿಷರ ಅಧೀನಕ್ಕೆ ಈ ಎಲ್ಲಾ ಪಾಳೆಪಟ್ಟುಗಳು ಸೇರಿದ ಕಾರಣವಾಗಿ ಅವರ ವಿರುದ್ಧ ಪಾಳೆಗಾರರು ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಹೋರಾಟ ಮಾಡಬೇಕಾಯಿತು.

ಕುಡತಿನಿಯ ಚರಿತ್ರೆಯ ಪ್ರಾಚೀನವಾಗಿದ್ದರೂ ಮಧ್ಯಕಾಲದಲ್ಲಿ ಮಹತ್ವ ಸಿಕ್ಕಿದ್ದು ಸ್ಥಳಿಯರು ಆಳ್ವಿಕೆ ನಡೆಸಿದುದರಿಂದ. ಅನಂತರ ವಿದೇಶಿಯರ ಪ್ರಭಾವಕ್ಕೆ ಒಳಗಾಯಿತು. ಇಂದಿಗೂ ಇಲ್ಲಿನ ನಾಯಕರು ಧೈರ್ಯಪರಾಕ್ರಮಿ ಶಾಲಿಗಳಾಗಿದ್ದು ಹುಲಿ ಚಿರತೆಗಳನ್ನು ಪಳಗಿಸಿ ಕೊಂದಿರುವ ಸಾಹಸ ಕೃತ್ಯಗಳನ್ನು ಸ್ಮರಿಸಿಕೊಳ್ಳುತ್ತಾರೆ.[೧೪]

- **ಕೊನೆ ಟಿಪ್ಪಣಿಗಳು**

೧. ೨೦೧೧ರ ಜನಗಣತಿ ವರದಿ.

೨. ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕದ ಕೈಫಿಯತ್ತುಗಳು, ಪು.೫೪೧.

೩. ಅದೇ, ಪು.೫೪೩.

೪. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪು.೨೭.

೫. ಗುರುಮೂರ್ತಿ ಪೆಂಡಕೂರು, ೨೦೦೬, ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೨.

೬. ಅದೇ, ಪು.೨೮.

೭. ವಾಸುದೇವ ಬಡಿಗೇರ, ೧೯೯೭, ಪೂರ್ವೋಕ್ತ, ಪು.೫೭.

೮. ಚಂದ್ರಶೇಖರ್ ಎಸ್. (ಸಂ), ೨೦೧೬, ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು, ಪು.೧೦೩.

೯. ಅದೇ, ಪು.೯೨.

೧೦. ಅದೇ, ಪು.೧೦೩.

೧೧. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪು.೧೨೨.

೧೨. ಚಂದ್ರಶೇಖರ್ ಎಸ್. (ಸಂ), ೨೦೧೬ ಪೂರ್ವೋಕ್ತ., ಪು.೫೭.

೧೩. ಅದೇ, ಪು.೧೦೩.

೧೪. ವಾಸುದೇವ ಬಡಿಗೇರ, ೧೯೯೭, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಿಕ ಅಧ್ಯಯನ, ಪು.೧೧-೧೨.

**೩. ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ**

೩.೧. ವಾಸ್ತುಶಿಲ್ಪ

- ಧಾರ್ಮಿಕ
- ಲೌಕಿಕ

೩.೨. ಮೂರ್ತಿಶಿಲ್ಪ

# ಅಧ್ಯಾಯ–ಮೂರು

# ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

## ೩.೧ ವಾಸ್ತುಶಿಲ್ಪ

ಅರವತ್ತನಾಲ್ಕು ಕಲೆಗಳಲ್ಲಿ ಒಂದಾದ ಶಿಲ್ಪಕಲೆಯ ಒಂದು ಭಾಗವಾಗಿರುವುದೇ ವಾಸ್ತುಶಿಲ್ಪ ಕಲೆ. ದೇವತೆಗಳು ಇಲ್ಲವೆ, ಮಹಾತ್ಮರ ಸಂಕೇತ ಇಲ್ಲವೆ, ಮೂರ್ತಿಗಳಿಗೋಸ್ಕರ ಮಾಡಿದ ಹಾಗೂ ಮನುಷ್ಯರು ವಾಸಿಸುವ ಸ್ಥಳ ಅಥವಾ ವಸತಿಯೇ ವಾಸ್ತು ಎನಿಸುತ್ತದೆ. ವಸ್ತುವಿನಿಂದ ರಚನೆಗೊಂಡ, ವಾಸ್ತುಯೋಗ್ಯವಾದ, ವಾಸ್ತುವಿನ (ನಿವೇಶನದ) ಮೇಲೆ ರಚಿಸಲಾದ ಎಲ್ಲ ರಚನೆಗಳನ್ನು ವಾಸ್ತುರಚನೆ ಎನ್ನಬಹುದು. ಮುಖ್ಯವಾಗಿ ಪೂರ್ವ ಅಥವಾ ಪಶ್ಚಿಮದಲ್ಲಿ ವಿಷ್ಣುವಿನ, ಈಶಾನ್ಯದಲ್ಲಿ ಶಿವ, ಉತ್ತರದಲ್ಲಿ ಸ್ಕಂಧ, ನೈರುತ್ಯದಲ್ಲಿ ಗಣಪತಿಯ ದೇವಾಲಯವನ್ನು ನಿರ್ಮಿಸಬೇಕೆಂದು ವಾಸ್ತು ಗ್ರಂಥಗಳಲ್ಲಿ ಹೇಳಿದೆ. ದೇವಾಲಯಗಳನ್ನು ಮರ, ಇಟ್ಟಿಗೆ ಅಥವಾ ಕಲ್ಲಿನಿಂದ ಕಟ್ಟಬಹುದು. ಆದರ ಕಲ್ಲಿನ ದೇವಾಲಯಗಳು ಶ್ರೇಷ್ಠವೆಂಬ ನಂಬಿಕೆ ಇದೆ; ಅಲ್ಲದೆ ಅವು ಶಾಶ್ವತವಾಗಿಯೂ ಉಳಿಯುವಂತಹುವು. ಆದ್ದರಿಂದ ಕಾಲಾನುಕ್ರಮದಲ್ಲಿ ಮರ, ಇಟ್ಟಿಗೆಗಳಿಗಿಂತ ಕಲ್ಲಿನ ದೇವಾಲಯ ರಚನೆಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಲಾಯಿತು. ಹೀಗಾಗಿ ಅಂತಹ ದೇವಾಲಯಗಳು ಇಂದಿಗೂ ಉಳಿದುಬಂದಿವೆ. ಆ ಮೂಲಕ ಪ್ರಾಚೀನ ಕಲಾಪರಂಪರೆಯ ಬಗ್ಗೆ ಅರಿವನ್ನು ಪಡೆಯಲು ಸಾಧ್ಯವಾಗಿದೆ. ವ್ಯಾಪಕವಾಗಿ ಹೇಳುವುದಾದರೆ ಮನುಷ್ಯರ ಜೀವನಾಭರಣಕ್ಕೆ ಅವಶ್ಯವಾದ ಯಾವುದೇ ರಚನೆ ಕೂಡ ವಾಸ್ತು ರಚನೆಯಾಗುತ್ತದೆ. ಈ ಕುಡುತಿನಿ ಗ್ರಾಮದಲ್ಲಿನ ವಾಸ್ತುಶಿಲ್ಪವನ್ನು ಈ ಕೆಳಗಿನಂತೆ ಕಾಣಬಹುದು. ವಾಸ್ತುಶಿಲ್ಪವನ್ನು ಧಾರ್ಮಿಕ ಮತ್ತು ಲೌಕಿಕ ಎಂದು ಎರಡು ರೀತಿಯಲ್ಲಿ ವಿಂಗಡಿಸಲಾಗಿದೆ.

### ೩.೧.೧ ಧಾರ್ಮಿಕ

ಧಾರ್ಮಿಕ ವಾಸ್ತುಶಿಲ್ಪವನ್ನು ಒಂದು ಧರ್ಮದ ಪ್ರತಿನಿಧಿಯಾಗಿದ್ದು ಇದರಲ್ಲಿ ಜೈನ/ ಬೌದ್ಧ/ ಇಸ್ಲಾಂ/ ಶೈವ/ ವೈಷ್ಣವ/ ಧರ್ಮಗಳ ದೇವ–ದೇವತೆಗಳ ಮೂರ್ತಿ ಇದ್ದು ಒಟ್ಟಾರೆ ಒಂದು ಧರ್ಮವನ್ನು ಪ್ರತಿನಿಧಿಸುವುದಾಗಿದೆ. ಇದರಲ್ಲಿ ಮುಖ್ಯವಾಗಿ ದೇವಾಲಯಗಳು, ಜೈನ ಬಸದಿಗಳು, ಬೌದ್ಧ ವಿಹಾರಗಳು, ಮಸೀದಿಗಳು, ಚರ್ಚುಗಳಾಗಿದ್ದು ಪ್ರತಿಯೊಂದು ಸಹ ತನ್ನದೇ ಆದ ಧರ್ಮವನ್ನು ತಿಳಿಯಪಡಿಸುತ್ತದೆ.

• ತಿಂಗಳೇಶ್ವರ ದೇವಾಲಯ

ಗ್ರಾಮ :– ಕುಡುತಿನಿ

ಕಾಲ ;– ಕ್ರಿ.ಶ.ಸು. ೧೨ನೆಯ ಶತಮಾನ.

ಶೈಲಿ :– ಕಲ್ಯಾಣ ಚಾಲುಕ್ಯ

ಸ್ಥಳ :– ಗ್ರಾಮದ ಒಳಗೆ

ಅಭಿಮುಖ :– ಪೂರ್ವ

ಸ್ಥಿತಿ :– ಉತ್ತಮ

ಸ್ಮಾರಕದ ಹೆಸರು :– ತಿಂಗಳೇಶ್ವರ ದೇವಾಲಯ

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದ್ದು, ಈ ದೇವಾಲಯಕ್ಕೆ ಎರಡು ದ್ವಾರಬಾಗಿಲುಗಳನ್ನು ಹೊಂದಿದೆ. ಗರ್ಭಗೃಹ, ಸಭಾ ಮಂಟಪವನ್ನು ಹೊಂದಿದ್ದು, ಗರ್ಭಗೃಹದಲ್ಲಿ ಲಿಂಗವಿದೆ. ಈ ದೇವಾಲಯವನ್ನು ಗಮನಿಸಿದಾಗ ಅಧಿಷ್ಟಾನ ಭಾಗದಲ್ಲಿ ಉಪಾನ, ಜಗತಿ, ಕುಮುದ, ಭಾಗಗಳಿಂದ ಕೂಡಿದೆ. ಭಿತ್ತಿಯ ಭಾಗದಲ್ಲಿ ಕೆಲವೊಂದು ಶಿಲ್ಪಗಳನ್ನು ಕಾಣಬಹುದು. ಮುಖ್ಯವಾಗಿ ನಾಗರ, ಆಮೆ ಶಿಲ್ಪಗಳ ಕೆತ್ತನೆಯನ್ನು ಕಾಣಬಹುದು. ಕಪೋತದ ಭಾಗದಲ್ಲಿ ಸೂರ್ಯ, ಚಂದ್ರರ ಶಿಲ್ಪಗಳ ಕೆತ್ತನೆಯನ್ನು ಸಹ ಕಾಣಬಹುದು. ತ್ರಿತಲ ಮಾದರಿಯ ದೇವಾಲಯವಾಗಿದೆ. ದ್ವಾರಪಾಲಕರನ್ನು ಹೊಂದಿದೆ. ಇಂದು ದ್ವಾರ ಬಾಗಿಲು ಮತ್ತು ಪ್ರಕಾರಗಳು ನಾಶದ ಅಂಚಿನಲ್ಲಿವೆ. ಮುಖ್ಯವಾಗಿ ಈ ದೇವಾಲಯದ ಆವರಣದಲ್ಲಿ ಬಾವಿಯಿದ್ದು ಪ್ರಸ್ತುತ ಇದನ್ನು ಮುಚ್ಚಿದ್ದು ಮೇಲೆ ನೀರಿನ ತೊಟ್ಟಿಯನ್ನು ನಿರ್ಮಿಸಿ ಉಪಯೋಗಿಸಲಾಗುತ್ತಿದೆ.

• ದೊಡ್ಡ ಹೊಸಗೇಶ್ವರ ದೇವಾಲಯ

ಗ್ರಾಮ :– ಕುಡತಿನಿ

ಕಾಲ :– ಕ್ರಿ.ಶ.ಸು ೧೫ನೆಯ ಶತಮಾನ

ಶೈಲಿ :– ವಿಜಯನಗರ

ಸ್ಥಳ :– ಗ್ರಾಮದ ಒಳಗೆ

ಅಭಿಮುಖ :– ಪೂರ್ವ

ಸ್ಥಿತಿ :– ಉತ್ತಮ

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದೆ. ಸುಮಾರು ೨೦೦ ವರ್ಷಗಳಷ್ಟು ಪ್ರಾಚೀನವಾದ ದೇವಾಲಯವು ಇದಾಗಿದ್ದು, ಇಂದು ನವೀಕರಣಗೊಂಡು ಪೂಜೆಗೆ ಒಳಪಡುತ್ತಿದೆ. ಈ ದೇವಾಲಯದಲ್ಲಿ ಗರ್ಭಗೃಹದಲ್ಲಿ ಕುದುರೆಯ ಮೇಲೆ ಕುಳಿತಿರುವ ಹೊಸಗೇಶ್ವರ ಮೂರ್ತಿಗೆ ತಾಮ್ರದ ಎಡೆಯಿರುವ ನಾಗರ ಹಾವಿನ ಇದರೊಂದಿಗೆ ಛತ್ರಿಯನ್ನು ಸಹ ನಿಲ್ಲಿಸಲಾಗಿದೆ. ಇದು ಚಂದ್ರಹಾಸನ ಪ್ರತಿರೂಪವಾಗಿರಬೇಕು ಎಂಬುದು ಬಲ್ಲವರ ಅಭಿಪ್ರಾಯ ಕೈಯಲ್ಲಿ ಬಾಕು ಹಿಡಿದಿರುವುದು ಇದಕ್ಕೆ ಪುಷ್ಠಿ ನೀಡುತ್ತದೆ.

- **ಕುಮಾರಸ್ವಾಮಿ ದೇವಾಲಯ (ಕುಡುತಿನಿ)**

**ಗ್ರಾಮ** :– **ಕುಡತಿನಿ**

**ಕಾಲ** :– **ಕ್ರಿ.ಶ.ಸು ೧೨ನೆಯ ಶತಮಾನ**

**ಶೈಲಿ** :– **ಕಲ್ಯಾಣ ಚಾಲುಕ್ಯ**

**ಸ್ಥಳ** :– **ಗ್ರಾಮದ ಒಳಗೆ**

**ಅಭಿಮುಖ** :– **ಪೂರ್ವ**

**ಸ್ಥಿತಿ** :– **ಉತ್ತಮ**

ಕುಡತಿನಿ ಗ್ರಾಮದ ಮಧ್ಯದಲ್ಲಿರುವ ಕುಮಾರಸ್ವಾಮಿ ದೇವಾಲಯವು ಮೂರು ಗರ್ಭಗೃಹ, ವಿಶಾಲವಾದ ಅಂತರಾಳ, ವಿಶಾಲವಾದ ಸಭಾಮಂಟಪವನ್ನು ಹೊಂದಿದೆ. ಒಂದೇ ಸಾಲಿನಲ್ಲಿರುವ ಮೂರು ಗರ್ಭಗೃಹಗಳಲ್ಲಿ ಬಲಭಾಗದ ಗರ್ಭಗೃಹದ ಪ್ರವೇಶದ್ವಾರವು ಪದ್ಮದ ಸಾಲು, ಹೂವಿನ ಎಸಳುಗಳು, ಅರ್ಧಗಂಬಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಮೇಲ್ಭಾಗದಲ್ಲಿ ರೇಖಾನಗರ ಶಿಖರಗಳು, ಇಕ್ಕೆಲಗಳಲ್ಲಿ ಮೂರರಂತೆ ದ್ವಾರಪಾಲಕರ ವಿಗ್ರಹಗಳಿವೆ. ಮಧ್ಯದ ವಿಗ್ರಹ ಜಟಾಮುಕುಟ ಕೈಗಳಲ್ಲಿ, ಡಮರುಗಳಿವೆ. ತ್ರಿಶೂಲ, ಗದಾ–ಅಭಯಹಸ್ತ ಮುದ್ರೆಯಲ್ಲಿದೆ. ಎಡ–ಬಲ ಭಾಗಗಳಲ್ಲಿ ಸ್ತ್ರೀ ವಿಗ್ರಹಗಳಿವೆ. ದ್ವಾರಪಾಲಕರ ವಿಗ್ರಹಗಳ ಎರಡು ಭಾಗಗಳಲ್ಲಿ ಅರ್ಧಗಂಬಗಳು ಅವುಗಳ ಮೇಲೆ ಮಕರ ತೋರಣ ಮಧ್ಯೆ ಕೀರ್ತಿಮುಖವಿದೆ. ಗರ್ಭಗೃಹದಲ್ಲಿ ಇತ್ತಿಚೆಗೆ ಪ್ರತಿಷ್ಠಾಪಿಸಿದ ಗಣೇಶನ ಮೂರ್ತಿ ಇದ್ದು, ಮೂಲ ಮೂರ್ತಿ ಅಂತರಾಳದಲ್ಲಿ ಹಾಳಾದ ಸ್ಥಿತಿಯಲ್ಲಿದೆ.[೧]

ಮಧ್ಯದ ಗರ್ಭಗೃಹದ ಪ್ರವೇಶದ್ವಾರ ಬಲಭಾಗದಂತಿದ್ದು, ಈ ದ್ವಾರಕ್ಕೆ ಯಾಳಿಯ ಸಾಲು ಕೂಡಿಕೊಂಡಿದೆ. ಅವುಗಳಲ್ಲಿ ಅಲ್ಲಲ್ಲಿ ಬಾಯಿಯಲ್ಲಿ ಸರಗಳನ್ನು (ಬಹುಶಃ ಸರ್ಪವನ್ನು) ಹಿಡಿದ ನವಿಲುಗಳಿವೆ. ಗರ್ಭಗೃಹದಲ್ಲಿ ಈಗಿರುವ ಶಿವಲಿಂಗದ ಬದಲಾಗಿ ಮೂಲತಃ ಇಲ್ಲಿ

ಕುಮಾರಸ್ವಾಮಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿರಬಹುದು. ಎಡಭಾಗದ ಗರ್ಭಗೃಹದ ಪ್ರವೇಶದ್ವಾರವು ಬಲಭಾಗದಂತಿದೆ. ಆದರೆ ಇಲ್ಲಿಯ ದ್ವಾರಪಾಲಕ ವಿಗ್ರಹಗಳು ಮಾತ್ರ ಭಿನ್ನವಾಗಿವೆ. ಈ ವಿಗ್ರಹಗಳು ಕಿರೀಟ ಮುಕುಟ ಕಕ್ಷೆಗಳಲ್ಲಿ ಶಂಖ, ಚಕ್ರ ಗದಾ–ಅಭಯ ಮುದ್ರೆಗಳಿವೆ. ಈ ವಿಗ್ರಹಗಳು ವೈಷ್ಣವ ಸಂಪ್ರದಾಯಕ್ಕೆ ಸಂಬಂಧಿಸಿದ್ದರಿಂದ ಮೂಲತಃ ಈ ಗರ್ಭಗೃಹದಲ್ಲಿರುವ ಶಿವಲಿಂಗದ ಬದಲಾಗಿ ವಿಷ್ಣು ಅಥವಾ ನಾರಾಯಣ ಮೂರ್ತಿಯನ್ನು ಪ್ರತಿಷ್ಠಾಪಿಸಿರಬಹುದು.

ಈ ದೇವಾಲಯದ ಅಂತರಾಳವು ವಿಶಾಲವಾಗಿದ್ದು, ಪ್ರವೇಶದ್ವಾರಕ್ಕೆ ಪದ್ಮದ ಸಾಲುಗಳು, ಅರ್ಧಗಂಬಗಳು ಕೆಳಭಾಗ ಇಳಿಬಿದ್ದ ಪದ್ಮದ ಗುಚ್ಚಗಳು ಮೇಲ್ಭಾಗ ರೇಖಾನಗರ ಶಿಖರಗಳಿವೆ. ಎತ್ತರವಾದ ಜಗತಿಯ ಮೇಲೆ ನಿರ್ಮಾಣವಾದ ಈ ದೇವಾಲಯವು ತ್ರಿಕೂಟಚಕ್ರವಾಗಿದೆ. ಮಧ್ಯದಲ್ಲಿರುವ ಗರ್ಭಗೃಹವೇ ಕುಮಾರಸ್ವಾಮಿಯದು. ಗರ್ಭಗೃಹದಲ್ಲಿಯ ಮೂಲ ಕುಮಾರಸ್ವಾಮಿಯ ವಿಗ್ರಹ ಹಾಳಾಗಿದ್ದು, ಇತ್ತೀಚೆಗೆ ಪ್ರತಿಷ್ಠಾಪಿಸಲಾದ ಶಿವಲಿಂಗವಿದೆ.

ಇಕ್ಕೆಲಗಳಲ್ಲಿ ದ್ವಾರಪಾಲಕ ವಿಗ್ರಹಗಳಿವೆ. ಈ ವಿಗ್ರಹಗಳು ಜಟಾಮುಕುಟ ಕೈಗಳಲ್ಲಿ ಡಮರು, ತ್ರಿಶೂಲ, ಗದಾವನ್ನು ಹೊಂದಿದ್ದು ಮತ್ತು ಅಭಯ ಮುದ್ರೆಯಲ್ಲಿದ್ದು, ತ್ರಿಭಂಗಿಯಲ್ಲಿವೆ. ಅಂತರಾಳದ ಮಧ್ಯೆ ಒಂದೇ ಸಾಲಿನಲ್ಲಿ ೬ ಕಂಬಗಳು ಮಧ್ಯದ ಎರಡು ಕಂಬಗಳು, ಆಕಾರದಲ್ಲಿ ಚಿಕ್ಕದಾಗಿವೆ. ಕೆಳಭಾಗದ ಪೀಠ ಅಸಮ ಚೌಕಾಕಾರದ ಮೇಲೆ ವೃತ್ತಾಕಾರ ಹಾಗೂ ವೃತ್ತಾಕಾರದ ಫಲಕಗಳನ್ನು ಹೊಂದಿವೆ. ಉಳಿದ ಕಂಬಗಳ ಪೀಠ ಕೆಳಗೆ ಮೇಲೆ ನಕ್ಷತ್ರಾಕಾರ ಮತ್ತು ಮಧ್ಯ ಚೌಕಾಕಾರದಲ್ಲಿದ್ದು, ಫಲಕ, ಬೋದಿಗೆಗಳಿಂದ ಕೂಡಿವೆ. ಈ ಕಂಬಗಳು ಅಂತರಾಳವನ್ನು ಎರಡು ಭಾಗಗಳನ್ನಾಗಿ ವಿಭಾಗಿಸಿವೆ. ಮೊದಲನೆಯ ಭಾಗ (ಗರ್ಭಗೃಹದ ಮುಂದಿನ ಭಾಗ) ೫ ಅಂಕಣಗಳು ಎರಡನೆಯ ಭಾಗ ೭ ಅಂಕಣಗಳಲ್ಲಿದೆ.

ಈ ದೇವಾಲಯವು ವಿಶಾಲವಾದ ಸಭಾಮಂಟಪ ಹೊಂದಿದ್ದು ೩೦ ಕಂಬಗಳು ಮತ್ತು ೩೫ ಅಂಕಣಗಳನ್ನು ಹೊಂದಿದೆ. ಸಭಾಮಂಟಪದಲ್ಲಿ (ಅಂತರಾಳದ) ಮುಂದಿನ ಸಾಲಿನಲ್ಲಿರುವ ಕಂಬಗಳು ಕೆಳ ಮತ್ತು ಮೇಲೆ ಚೌಕಾಕಾರ ಮಧ್ಯೆ ವೃತ್ತಾಕಾರದಲ್ಲಿದ್ದು (ವೃತ್ತಾಕಾರದ ಪಟ್ಟಿ ಪದ್ಮದ ಸಾಲುಗಳಿವೆ) ಮೇಲ್ಭಾಗ ವೃತ್ತಾಕಾರದ ಫಲಕ ಹಾಗೂ ಚೌಕಾಕಾರದ ಬೋದಿಗೆಗಳಿಂದ ಕೂಡಿದೆ. ಮಧ್ಯದ ಮೂರು ಸಾಲುಗಳಲ್ಲಿರುವ ಕಂಬಗಳು, ಕೆಳಭಾಗ ಪೀಠ, ಕೆಳಗೆ ಮತ್ತು ಮೇಲೆ ಚೌಕಾಕಾರವಾಗಿದ್ದು, ಮಧ್ಯ ೧೬ ಪಟ್ಟಿಕೆಗಳ ವೃತ್ತಾಕಾರದಲ್ಲಿದ್ದು (ಅದರಲ್ಲಿ ಸರಪಳಿಯ ಸಾಲಿಗಳಿವೆ) ವೃತ್ತಾಕಾರದ ಫಲಕ ಬೋದಿಗೆಗಳಿಂದ ಕೂಡಿದೆ.[೨] ಮುಂದಿನ ಭಾಗ ಒಂದು ಸಾಲಿನಲ್ಲಿರುವ ಕಂಬಗಳು ಕೆಳಗೆ ಚೌಕಾಕಾರ, ಮಧ್ಯದಲ್ಲಿ ನಕ್ಷತ್ರಾಕಾರ, ಮೇಲೆ ವೃತ್ತಾಕಾರವಾಗಿವೆ.

ಪ್ರವೇಶದ ಇಕ್ಕೆಲಗಳಲ್ಲಿರುವ ಕಂಬಗಳು ಆಕಾರದಲ್ಲಿ ದೊಡ್ಡದಾಗಿವೆ ಹಾಗೂ ಭುವನೇಶ್ವರಗಳನ್ನು ಕೆತ್ತಲಾಗಿದೆ.

- **ವೆಂಕಟೇಶ್ವರ ದೇವಸ್ಥಾನ**

**ಗ್ರಾಮ** :- **ಕುಡತಿನಿ**

**ಕಾಲ** :- **ಕ್ರಿ.ಶ.ಸು ೧೨ನೆಯ ಶತಮಾನ.**

**ಶೈಲಿ** :- **ಕಲ್ಯಾಣ ಚಾಲುಕ್ಯ**

**ಸ್ಥಳ** :- **ಗ್ರಾಮದ ಒಳಗೆ**

**ಅಭಿಮುಖ** :- **ಪೂರ್ವ**

**ಸ್ಥಿತಿ** :- **ಮಧ್ಯಮ**

ಈ ಗ್ರಾಮದ ಮಧ್ಯ ಭಾಗದಲ್ಲಿ ಈ ದೇವಾಲಯವಿದೆ. ಈ ಶೈಲಿಯು ಚಾಲುಕ್ಯ ಮಾದರಿಯ ದೇವಾಲಯವಾಗಿದ್ದು, ಉತ್ತರಾಭಿಮುಖವಾಗಿ ವಿಶಾಲವಾದ ಪ್ರಾಕಾರದಲ್ಲಿ ನಿರ್ಮಾಣವಾಗಿದೆ. ಈ ದೇವಾಲಯವು ತ್ರಿಕೂಟ ದೇವಾಲಯವಾಗಿದೆ. ಶಾಸನದಲ್ಲಿ ಉಲ್ಲೇಖಿಸಿದಂತೆ ಸರಸ್ವತಿ, ವಿನಾಯಕ, ಮಾರ್ತಾಂಡೇಶ್ವರ ಮೂರ್ತಿಗಳನ್ನು ಹೊಂದಿದ ದೇವಾಲಯವಾಗಿರಬಹುದೆಂದು ಡಾ.ವಾಸುದೇವ ಬಡಿಗೇರ ಅವರು ತಮ್ಮ 'ಸಂಡೂರು ಪರಿಸರದ ಕಾರ್ತಿಕೇಯ ತೋಪೋವನ ಚಾರಿತ್ರಿಕ ಅಧ್ಯಯನ' ಎಂಬ ಕೃತಿಯಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಇಂದು ಈ ತ್ರಿಕೂಟ ದೇವಾಲಯದಲ್ಲಿ ಪೂರ್ವಾಭಿಮುಖವಾಗಿ ಈಶ್ವರ ಮತ್ತು ನಂದಿ ಇದ್ದು, ಉತ್ತರಾಭಿಮುಖವಾಗಿ ಇತ್ತೀಚೆಗೆ ವೆಂಕಟೇಶ್ವರ ಮೂರ್ತಿಯನ್ನು ಪಶ್ಚಿಮಾಭಿಮುಖವಾಗಿ ಕನ್ನಿಕಾ ಪರಮೇಶ್ವರಿಯನ್ನಿಟ್ಟು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯವು ಸಭಾಮಂಟಪ ಮತ್ತು ತೆರೆದ ಅಂತರಾಳವನ್ನು ಹೊಂದಿದ್ದು ಸಭಾಮಂಟಪವು ೧೮ ಕಂಬಗಳಿಂದ ಕೂಡಿದೆ. ವೆಂಕಟೇಶ್ವರ ಗರ್ಭಗೃಹದ ಮುಂದಿನ ದ್ವಾರಬಾಗಿಲು ಅಲಂಕೃತವಾಗಿಸಿದ್ದು ಪಂಚ ಲೋಹಗಳಿಂದ ಮಾಡಿದ ಶಿಲ್ಪಗಳಿವೆ. ಲಲಾಡ ಭಾಗದಲ್ಲಿ ಗಜಲಕ್ಷ್ಮೀ ಇದ್ದು, ಗಜಲಕ್ಷ್ಮಿಯ ಎರಡುಕಡೆ ಗರುಡವಿದ್ದು, ಕಾಮಧೇನು ಮತ್ತು ಐರಾವತವನ್ನು ಕಾಣಬಹುದು. ಹಾಗೆಯೇ ಕೆಳಗಿನ ಸಾಲಿನಲ್ಲಿ ಲಕ್ಷ್ಮೀ, ಶ್ರೀರಾಮ, ನರಸಿಂಹ, ಗರುಡ, ಅನಂತಪದ್ಮನಾಭ, ಆಂಜನೇಯ, ಗಣೇಶ, ಶ್ರೀಕೃಷ್ಣ, ಶಾರದ ಮಾತೆಯ ಶಿಲ್ಪವನ್ನು ಕಾಣಬಹುದು. ಮುಖ್ಯವಾಗಿ ಈ ಗರ್ಭಗೃಹದ ದ್ವಾರಪಾಲಕರು ಶಂಖ, ಚಕ್ರ, ಗದೆಯನ್ನು ಹೊಂದಿದ್ದಾರೆ. ಈಶ್ವರ ಗರ್ಭಗೃಹದ ಲಲಾಟದಲ್ಲಿ ಗಜಲಕ್ಷ್ಮಿಯು ಇದ್ದು ಸಾಧಾರಣವಾಗಿ

ದ್ವಾರಬಾಗಿಲು ಅಲಂಕೃತವಾಗಿದ್ದು, ಕುಂಬ ಪಂಜರಗಳಿಂದ ಅಲಂಕೃತವಾಗಿದೆ. ಮತ್ತೊಂದು ಗರ್ಭಗೃಹದಲ್ಲಿ ಕನ್ನಿಕಾ ಪರಮೇಶ್ವರಿ ದೇವಿಯ ಬಿಳಿಯ ಗ್ರಾನೈಟ್ ವಿಗ್ರಹವಿದ್ದು, ಇದು ತೀರ ಇತ್ತೀಚಿನದೆಂದು ಹೇಳಬಹುದು. ಒಟ್ಟಾರೆಯಾಗಿ ಈ ದೇವಾಲಯದ ಹೊರಗೋಡೆಯ ಅಧಿಷ್ಠಾನವು ಉಪಾನ, ಜಗತಿ, ಕುಮುದ ಮತ್ತು ಪದ್ಮಗಳಿಂದ ಕೂಡಿದೆ. ದೇವಾಲಯದ ತಳಪಾಯವನ್ನು ವೀಕ್ಷಿಸಿದಾಗ ಇದು ಮೂಲತಃ ತ್ರಿಕೂಟಾಚಲವಾಗಿದ್ದಂತೆ ಕಂಡುಬರುತ್ತದೆ. ಈ ದೇವಾಲಯದ ಆವರಣದಲ್ಲಿ ಕೆಲವೊಂದು ನಾಗರ ಶಿಲ್ಪಗಳನ್ನು, ಗಣೇಶ ಚಿಕ್ಕ ವಿಗ್ರಹವನ್ನು ಆಂಜನೇಯ ವಿಗ್ರಹವನ್ನು ಕಾಣಬಹುದು.[೩]

- **ದೊಡ್ಡ ಆಂಜನೇಯ ದೇವಸ್ಥಾನ**

| | |
|---|---|
| **ಗ್ರಾಮ** | **:– ಕುಡತಿನಿ** |
| **ಕಾಲ** | **:– ಕ್ರಿ.ಶ.ಸು ೧೬ನೆಯ ಶತಮಾನ** |
| **ಶೈಲಿ** | **:– ವಿಜಯನಗರ** |
| **ಸ್ಥಳ** | **:– ಗ್ರಾಮದ ಒಳಗೆ** |
| **ಅಭಿಮುಖ** | **:– ಉತ್ತರ** |
| **ಸ್ಥಿತಿ** | **:– ಉತ್ತಮ** |

ಈ ಕುಡತಿನಿ ಗ್ರಾಮದ ಮುಖ್ಯ ದೇವಾಲಯವಾಗಿದ್ದು, ಗ್ರಾಮದ ಮಧ್ಯ ಭಾಗದಲ್ಲಿದಲ್ಲಿದೆ. ಸೀತಾ, ರಾಮ, ಲಕ್ಷ್ಮಣ ವಿಗ್ರಹಗಳಿದ್ದು ಇದನ್ನು ಜನರು ಸೀತಾ–ರಾಮ ದೇವಾಲಯ ಎಂದು ಕರೆಯುವರು. ಮುಖ್ಯವಾಗಿ ೧೦ ಅಡಿ ಎತ್ತರದ ಆಂಜನೇಯ ವಿಗ್ರಹವಿದ್ದು ವ್ಯಾಸರಾಯ ಎಂಬ ಋಷಿಮುನಿಯಿಂದ ಸ್ಥಾಪಿತವಾದದ್ದಾಗಿದೆ. ಗರ್ಭಗುಡಿ, ಅಂತರಾಳ, ಸಭಾಮಂಟಪ ಹೊಂದಿದ್ದು ೩ ದಿಕ್ಕಿಗೆ ದ್ವಾರ ಬಾಗಿಲುಗಳಿವೆ (ಪೂರ್ವ, ಉತ್ತರ, ದಕ್ಷಿಣ). ಆವರಣದಲ್ಲಿ ಬಾವಿಯನ್ನು ನಿರ್ಮಾಣ ಮಾಡಿದ್ದು, ಆದರೆ ಇಂದು ಅದು ಬತ್ತಿ ಹೋಗಿದೆ. ಸಭಾ ಮಂಟಪದಲ್ಲಿ ೧೬ ಕಂಬಗಳಿವೆ. ಎರಡು ದೀಪಸ್ಥಂಭಗಳನ್ನು ಹೊಂದಿದೆ. ಬಲಿಹರಣ ಹಾಕುವ ಸ್ಥಂಬಗಳು ದೇವಾಲಯದ ನಾಲ್ಕು ದಿಕ್ಕಿಗೆ ಇದ್ದವು, ಈಗ ಕೇವಲ ಎರಡು ಮಾತ್ರ ಉಳಿದಿವೆ. ಕೆಲವೊಂದು ನಾಗರ ಶಿಲ್ಪಗಳನ್ನು ಕಾಣಬಹುದು. ಈ ದೇವಾಲಯದ ಸೀತಾರಾಮ ದೇವರ ಹಾಗೂ ದೊಡ್ಡ ಆಂಜನೇಯಸ್ವಾಮಿ ದೇವರ ರಥೋತ್ಸವು ಪ್ರತಿವರ್ಷ ವಿಜೃಂಭಣೆಯಿಂದ ನಡೆಯುತ್ತದೆ. ವರ್ಷದ ಜೂನ್ ತಿಂಗಳಿನಲ್ಲಿ ರಥೋತ್ಸವವನ್ನು ಮಾಡಿ ಸುಮಾರು ಎಂಟು (೮) ದಿನಗಳ ಕಾಲ ನಿತ್ಯಮಹೋತ್ಸವಗಳನ್ನು ಹಮ್ಮಿಕೊಳ್ಳುತ್ತಾರೆ. ಅವುಗಳಲ್ಲಿ

ಕಂಕಣ ಮಹೋತ್ಸವ, ಪಂಚಾಮೃತ, ಅಭಿಷೇಕ, ಹೋಮಗಳನ್ನು, ಬಲಿಹರಣ, ಸೀತಾರಾಮ ಕಲ್ಯಾಣ ಮಹೋತ್ಸವ, ಮಡಿ ರಥೋತ್ಸವ ಮತ್ತು ಮಹಾರಥೋತ್ಸವಗಳೆಂದು ಆಚರಿಸುತ್ತಾರೆ.

- **ಹಾಲುಬಾವಿ ಆಂಜನೇಯ ದೇವಸ್ಥಾನ**

**ಗ್ರಾಮ** :– **ಕುಡತಿನಿ**

**ಕಾಲ** :– **ಕ್ರಿ.ಶ.ಸು ೧೬ನೆಯ ಶತಮಾನ**

**ಶೈಲಿ** :– **ವಿಜಯನಗರ**

**ಸ್ಥಳ** :– **ಗ್ರಾಮದ ಒಳಗೆ**

**ಅಭಿಮುಖ** :– **ದಕ್ಷಿಣ**

**ಸ್ಥಿತಿ** :– **ಉತ್ತಮ**

ಈ ದೇವಾಲಯವು ಹಾಲುಬಾವಿ ಹತ್ತಿರವಿರುವುದರಿಂದ ಇದಕ್ಕೆ ಹಾಲುಬಾವಿ ಆಂಜನೇಯ ಎಂದು ಕರೆಯುತ್ತಾರೆ. ಪೂರ್ವ ವ್ಯಾಸರಾಯ ಎಂಬ ಮುನಿಗಳು ಈ ಪ್ರದೇಶದಲ್ಲಿ ಏಳು ಆಂಜನೇಯ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದಾರೆ ಎಂಬ ಐತಿಹ್ಯವಿದ್ದು, ಈ ದೇವಾಲಯದಲ್ಲಿ ಆಂಜನೇಯ ವಿಗ್ರಹವಿದ್ದು ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಿಜಯನಗರ ಕಾಲಕ್ಕೆ ಸಂಬಂಧಿಸಿದ್ದಾಗಿದೆ ಎಂದು ತಿಳಿಯುತ್ತದೆ. ಈ ದೇವಾಲಯವು ಗರ್ಭಗೃಹ ಹೊಂದಿದ್ದು ಇಲ್ಲಿಯೇ ಧ್ವಂಸವಾದ ಲಿಂಗ ಮತ್ತು ನಂದಿಯ ವಿಗ್ರಹಗಳು ಸಹ ಇವೆ.

- **ಕನಕರಾಯ ಆಂಜನೇಯ ದೇವಸ್ಥಾನ**

**ಗ್ರಾಮ** :– **ಕುಡತಿನಿ**

**ಕಾಲ** :– **ಕ್ರಿ.ಶ.ಸು ೧೬ನೆಯ ಶತಮಾನ**

**ಶೈಲಿ** :– **ವಿಜಯನಗರ**

**ಸ್ಥಳ** :– **ಗ್ರಾಮದ ಒಳಗೆ**

**ಅಭಿಮುಖ** :– **ಉತ್ತರ**

**ಸ್ಥಿತಿ** :– **ಉತ್ತಮ**

ಈ ಗ್ರಾಮದ ದಕ್ಷಿಣದ ದಿಕ್ಕಿಗೆ ಇದ್ದು, ಇದೂ ಸಹ ವ್ಯಾಸರಾಯ ಎಂಬ ಋಷಿಮುನಿಗಳಿಂದ ಸ್ಥಾಪಿತವಾದದ್ದು ಎಂದು ತಿಳಿದು ಬರುತ್ತದೆ. ಈ ದೇವಾಲಯವು ಗರ್ಭಗೃಹದಲ್ಲಿ ೭ ಅಡಿ ಎತ್ತರದ ಆಂಜನೇಯ ವಿಗ್ರಹವಿದ್ದು, ಸಭಾ ಮಂಟಪವನ್ನು

ಹೊಂದಿದ್ದು, ಮಂಟಪದಲ್ಲಿ ೮ ಕಂಬಗಳನ್ನು ಹೊಂದಿದೆ. ಭಿತ್ತಿಯ ಹೊರಭಾಗದಲ್ಲಿ ವಿಷ್ಣುವಿನ ಶಿಲ್ಪವಿದ್ದು ಶಂಖ, ಚಕ್ರ, ಗದಾವನ್ನು ಹೊಂದಿರುವನು. ಈ ದೇವಾಲಯದ ಆವರಣದಲ್ಲಿ ಗರ್ಭಗೃಹದ ಎದುರುಗಡೆ ಒಂದು ದೀಪಸ್ತಂಭವಿದ್ದು ಚಿಕ್ಕ-ಚಿಕ್ಕ ನಾಗರ ಶಿಲ್ಪಗಳು, ಗಣೇಶನ ಚಿಕ್ಕ ಶಿಲ್ಪವಿದೆ. ಮೂಲತಃ ಈ ವಿಗ್ರಹವು ವಿಜಯನಗರ ಕಾಲದ್ದಾಗಿದೆ. ಸೂಕ್ಷ್ಮವಾಗಿ ಗಮನಿಸಿ ನೋಡಿದಾಗ ಈ ಗ್ರಾಮದ ಜನರು ಈ ದೇವಾಲಯವನ್ನು ಕನಕಗಿರಿ ಆಂಜನೇಯ ಎಂದು ಕರೆಯುತ್ತಾರೆ.

- **ಅರಳೀ ಕಟ್ಟೆ ಆಂಜನೇಯ ಸ್ವಾಮಿ ದೇವಸ್ಥಾನ**

| | |
|---|---|
| **ಗ್ರಾಮ** | **:- ಕುಡತಿನಿ** |
| **ಕಾಲ** | **:- ಕ್ರಿ.ಶ.ಸು ೧೨ನೆಯ ಶತಮಾನ** |
| **ಶೈಲಿ** | **:- ವಿಜಯನಗರ** |
| **ಸ್ಥಳ** | **:- ಗ್ರಾಮದ ಒಳಗೆ** |
| **ಅಭಿಮುಖ** | **:- ಉತ್ತರ** |
| **ಸ್ಥಿತಿ** | **:- ಉತ್ತಮ** |

ಈ ದೇವಾಲಯವು ಕುಡತಿನಿ ಗ್ರಾಮದ ಮಧ್ಯಭಾಗದಲ್ಲಿದ್ದು, ಗರ್ಭಗೃದಲ್ಲಿ ಸುಮಾರು ೧ ಅಡಿ ಎತ್ತರವಿದ್ದು ಈ ವಿಗ್ರಹದ ವಿಶೇಷವೆಂದರೆ ಆಂಜನೇಯ ವಿಗ್ರಹದ ಮೇಲ್ಬಾಗದಲ್ಲಿ ರಾಮ, ಸೀತೆ, ಲಕ್ಷ್ಮಣ ವಿಗ್ರಹವನ್ನು ಕೆತ್ತಲಾಗಿದ್ದು ಈ ನಾಲ್ಕು ವಿಗ್ರಹಗಳು ಒಂದೇ ಕಲ್ಲಿನಲ್ಲಿ ಕೆತ್ತಲ್ಪಟ್ಟಿರುವಂತೆ ಕಂಡುಬರುತ್ತದೆ. ಆಂಜನೇಯನ ಎಡಭಾಗದಲ್ಲಿ ತಾಮ್ರದ ಚಕ್ರ ಬಲ ಭಾಗದಲ್ಲಿ ದ್ವಿನಾಗರ ಶಿಲ್ಪಗಳನ್ನು ಕಾಣಬಹುದು. ಮಂಟಪ ಭಾಗದಲ್ಲಿ ಪಂಚಲೋಹಗಳಿಂದ ಮಾಡಿದ ರಾಮ, ಲಕ್ಷ್ಮಣ, ಸೀತೆಯ ವಿಗ್ರಹಗಳಿವೆ. ದೇವಾಲಯದ ಮುಂದೆ ಒಂದು ದೀಪಸ್ಥಂಭವನ್ನು ಸ್ಥಾಪಿಸಲಾಗಿದೆ. ಮುಖ್ಯವಾಗಿ ಈ ಅರಳೀಕಟ್ಟೆ ಆಂಜನೇಯ ಸ್ವಾಮಿಯನ್ನು ಪ್ರತಿ ವರ್ಷ ಯುಗಾದಿ ಹಬ್ಬದಂದು ೭ ದಿನಗಳ ಕಾಲ ಸಪ್ತ ಭಜನೆ (ಹಗಲು-ರಾತ್ರಿ ಭಜನೆ ಪದಗಳನ್ನು ಹಾಡುವುದು) ಮಾಡಿ ಯುಗಾದಿ ಪಾಂಡ್ಯದ ದಿನದಂದು ರಥೋತ್ಸವ ಮಾಡುವರು.

* **ಬೋಳು ಬಸವಣ್ಣ ದೇವಸ್ಥಾನ.**

**ಗ್ರಾಮ** :- **ಕುಡತಿನಿ**

**ಕಾಲ** :- **ಕ್ರಿ.ಶ.ಸು ೧೨ನೆಯ ಶತಮಾನ**

**ಶೈಲಿ** :- **ಕಲ್ಯಾಣ ಚಾಲುಕ್ಯ**

**ಸ್ಥಳ** :- **ಗ್ರಾಮದ ಒಳಗೆ**

**ಅಭಿಮುಖ** :- **ಪೂರ್ವ**

**ಸ್ಥಿತಿ** :- **ಉತ್ತಮ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದೆ. ಗರ್ಭಗೃಹ, ಸಭಾ ಮಂಟಪವನ್ನು ಹೊಂದಿದ್ದು ಗರ್ಭಗೃಹದಲ್ಲಿ ಬಸವಣ್ಣನ ತಾಮ್ರದ ವಿಗ್ರಹವಿದು ೩ ಅಡಿ ಎತ್ತರವಿದೆ ಗರ್ಭಗೃಹದ ದ್ವಾರಬಾಗಿಲಿನ ಲಲಾಟದಲ್ಲಿ ಗಜಲಕ್ಷ್ಮಿ ಇದ್ದು, ಎಲ್ಲಾ ಶಾಖೆಯಿಂದ ಅಲಂಕೃತಗೊಂಡಿದೆ. ಪ್ರಸ್ತುತ ಈ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಲಾಗಿದೆ.[೪]

* **ಗಿರಿಯಪ್ಪ ತಾತನ ಮಠ**

ಈ ದೇವಾಲಯವು ಗ್ರಾಮದ ಚಲುವಾದಿ ಕೇರಿಯಲ್ಲಿದ್ದು, ಇದು ಮೂಲತ ವಿಜಯನಗರ ಕಾಲದ್ದಾಗಿದೆ. ಈ ದೇವಾಲಯದಲ್ಲಿ ವಿಷ್ಣುವಿನ ವಿಗ್ರಹವಿದ್ದು ಶಂಖ, ಚಕ್ರಗಳನ್ನು ಹೊಂದಿರುವನು. ಮೂಲ ವಿಗ್ರಹವು ನಾಶವಾಗಿದ್ದು ಅಲ್ಲಿ ಕುಡುತಿನಿ ಸಮೀಪದ ವಡ್ಡು ತಾಳೂರಿನ ಜೋಗ್ ಎಂಬ ಊರಿನಿಂದ ಗಿರಿಯಪ್ಪ ತಾತನ ಮಠದ ಸಹಾಯದಿಂದ ವಿಷ್ಣುವಿನ ವಿಗ್ರಹ ಪ್ರತಿಷ್ಠಾಪಿಸಿ ಅಲ್ಲಿನ ಜನರಿಂದಲೇ ಪೂಜೆಗೆ ಒಳಪಡುತ್ತಿದೆ. ಈ ದೇವಾಲಯದ ಸಭಾಮಂಟಪವು ಶಿಥಿಲಾವಸ್ಥೆಯಲ್ಲಿದೆ. ಮೇಲ್ಛಾವಣಿಯ ಮೇಲೆ ಎಡ ಮತ್ತು ಬಲಕ್ಕೆ ವಿನಾಯಕನ ಗಾರೆ ಶಿಲ್ಪವಿದ್ದು ನಡುವೆ ಎರಡು ಆನೆಗಳ ನಡುವೆ ಶ್ರೀ ಕೃಷ್ಣನ ಶಿಲ್ಪವಿದೆ. ಶ್ರಾವಣ ಮಾಸದ ಕೊನೆಯ ಶನಿವಾರದಂದು ಇಲ್ಲಿ ಜೋಗದಿಂದ ಬಿಂದಿಗೆ ನೀರು ತಂದು ವಿಷ್ಣುವಿಗೆ ಪೂಜೆಸಲ್ಲಿಸಿ ಜಾತ್ರಾ ಉತ್ಸವವನ್ನು ಕೈಗೊಳ್ಳುವರು.

* **ಮದಲಮ್ಮ ದೇವಾಲಯ**

ಈ ದೇವಾಲಯವು ಚೆಲುವಾದಿ ಕೇರಿಯಲ್ಲಿದ್ದು ಮುಖ್ಯವಾಗಿ ಮದಲಮ್ಮನ ವಿಗ್ರಹವಿದೆ. ಇದು ಸಹ ಪ್ರಾಚೀನ ದೇವಾಲಯವಾಗಿದ್ದು ೧೬ ಕಂಬಗಳನ್ನು ಮಂಟಪಭಾಗದಲ್ಲಿ ಕಾಣಬಹುದು. ಇಲ್ಲಿಯೂ ಸಹ ಕೆಲವೊಂದು ನಾಗರ ಶಿಲ್ಪಗಳನ್ನು ಕಾಣಬಹುದು. ಈ

ದೇವಾಲಯದ ಎಡಕ್ಕೆ ಪ್ರಾಚೀನ ಬಾವಿಯಿದ್ದು ಹಳೇಬಾವಿ ಎಂದು ಕರೆಯಲ್ಪಡುತ್ತಿದೆ. ಇಂದು ಇದು ಬತ್ತಿ ಹೋಗಿದೆ.

- **ಗವಿ ಹನುಮಂತ ದೇವಸ್ಥಾನ**

| | |
|---|---|
| **ಗ್ರಾಮ** | :- **ಕುಡತಿನಿ** |
| **ಕಾಲ** | :- **ಕ್ರಿ.ಶ.ಸು ೧೬ನೆಯ ಶತಮಾನ.** |
| **ಶೈಲಿ** | :- **ವಿಜಯನಗರ** |
| **ಸ್ಥಳ** | :- **ಗ್ರಾಮದ ಒಳಗೆ** |
| **ಅಭಿಮುಖ** | :- **ಉತ್ತರ** |
| **ಸ್ಥಿತಿ** | :- **ಉತ್ತಮ** |

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದ್ದು, ಪಾವುಗಡ್ಡೆರ ಓಣಿಯಲ್ಲಿದ್ದು ಈ ಮೂರ್ತಿಯನ್ನು ಪೂರ್ವ ವ್ಯಾಸರಾಯರು ಪ್ರತಿಷ್ಠಾಪಿಸಿದರು ಎಂದು ಹೇಳಲಾಗಿದೆ, ಇಲ್ಲಿ ೩ ಅಡಿ ಎತ್ತರದ ಆಂಜನೇಯ ವಿಗ್ರಹವಿದ್ದು, ಪೂಜೆಗೆ ಒಳಪಡುತ್ತಿರುವ ಈ ಆಂಜನೇಯ ವಿಗ್ರಹದ ಜೊತೆಗೆ ಜನರು ಸುಮಾರು ೫ ಎತ್ತರದ ಆಂಜನೇಯ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿ, ದೇವಾಲಯವನ್ನು ಜೀರ್ಣೋದ್ಧಾರಗೊಳಿಸಲಾಗಿದೆ.

- **ಕಲ್ಲೂರು ಆಂಜನೇಯ**

| | |
|---|---|
| **ಗ್ರಾಮ** | :- **ಕುಡತಿನಿ** |
| **ಕಾಲ** | :- **ಕ್ರಿ.ಶ.ಸು ೧೬ನೆಯ ಶತಮಾನ.** |
| **ಶೈಲಿ** | :- **ವಿಜಯನಗರ** |
| **ಸ್ಥಳ** | :- **ಗ್ರಾಮದ ಒಳಗೆ** |
| **ಅಭಿಮುಖ** | :- **ಉತ್ತರ** |
| **ಸ್ಥಿತಿ** | :- **ಉತ್ತಮ** |

ಈ ಗ್ರಾಮದ ಪಶ್ಚಿಮಭಾಗದಲ್ಲಿದ್ದು ಸುಮಾರು ೪ ಅಡಿ ಎತ್ತರದ ಆಂಜನೇಯವಾಗಿದೆ. ಗರ್ಭಗೃಹ, ಸಭಾಮಂಟಪವಿದ್ದು ಇಂದು ಈ ದೇವಾಲಯವು ಸ್ವಲ್ಪ ಬದಲಾವಣೆಯಾಗಿದೆ. ಸಂರಕ್ಷಣೆ ನಡೆಯಬೇಕಾಗಿದ್ದು ಈ ದೇವಾಲಯದ ಆವರಣದಲ್ಲಿ ದೀಪ ಸ್ತಂಭವಿದ್ದು, ಮುಖ್ಯವಾಗಿ ಹೊರಗಿನ ಪ್ರಕಾರದಲ್ಲಿ ಒಂದು ಶಿಲಾ ಶಾಸನವಿದ್ದು, ಅದು ಸ್ವಲ್ಪ ಮಟ್ಟಿಗೆ ಮಾತ್ರ

ಕಾಣಬರುತ್ತಿದೆ. ಸಪ್ತ ಮಾತೃಕೆಯರ ಶಿಲ್ಪವಿದೆ. ಮುಖ್ಯವಾಗಿ ಈ ದೇವಾಲಯದ ಶೈಲಿಯನ್ನು ಗಮನಿಸಿದಾಗ ವಿಜಯನಗರ ಕಾಲದ್ದಾಗಿರಬಹುದು.

- **ವರಗೈ ಆಂಜನೇಯ ಸ್ವಾಮಿ**

**ಗ್ರಾಮ** :- **ಕುಡತಿನಿ**

**ಕಾಲ** :- **ಕ್ರಿ.ಶ.ಸು ೧೬ನೆಯ ಶತಮಾನ.**

**ಶೈಲಿ** :- **ವಿಜಯನಗರ**

**ಸ್ಥಳ** :- **ಗ್ರಾಮದ ಒಳಗೆ**

**ಅಭಿಮುಖ** :- **ಉತ್ತರ**

**ಸ್ಥಿತಿ** :- **ಉತ್ತಮ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದೆ. ಕುಂಬಾರ ಬೀದಿಯಲ್ಲಿದೆ. ಗರ್ಭಗೃಹದಲ್ಲಿ ಸುಮಾರು ೩ ಅಡಿ ಎತ್ತರದ ಆಂಜನೇಯ ವಿಗ್ರಹವಿದೆ. ಕೃಷ್ಣದೇವರಾಯನ ಗುರುಗಳಾದ ವ್ಯಾಸರಾಯರಿಂದ ಸ್ಥಾಪಿತವಾದ ದೇವಾಲಯವಾಗಿದೆ.

- **ರಾಮಲಿಂಗೇಶ್ವರ ಮಠ**

**ಗ್ರಾಮ** :- **ಕುಡತಿನಿ**

**ಕಾಲ** :- **ಕ್ರಿ.ಶ.ಸು ೯ನೆಯ ಶತಮಾನ**

**ಶೈಲಿ** :- **ರಾಷ್ಟ್ರಕೂಟ**

**ಸ್ಥಳ** :- **ಗ್ರಾಮದ ದಕ್ಷಿಣಕ್ಕೆ**

**ಅಭಿಮುಖ** :- **ಪೂರ್ವ**

**ಸ್ಥಿತಿ** :- **ಮಧ್ಯಮ**

ಕುಡತಿನಿಯಲ್ಲಿ ಕಂಡುಬರುವ ಇನ್ನೊಂದು ದೇವಾಲಯವಾಗಿದೆ. ಮೂಲತಃ ಜೈನಬಸದಿಯಾಗಿದ್ದು ಕಾಲ ಕ್ರಮೇಣವಾಗಿ ರಾಮಲಿಂಗೇಶ್ವರ ಮಠವಾಗಿದೆ. ಈ ಗ್ರಾಮದ ದಕ್ಷಿಣ ಭಾಗದಲ್ಲಿ ದೇವಾಲಯವಿದ್ದು, ಅಂತರಾಳ ಮತ್ತು ಗರ್ಭಗೃಹ ಮಾತ್ರ ಉಳಿದಿದ್ದು ಮುಂದಿನ ಭಾಗಗಳು ನಾಶವಾಗಿವೆ. ಅಂತರಾಳದ ಪ್ರವೇಶದಲ್ಲಿ ಚಾಲುಕ್ಯ ಮಾದರಿಯ ಎರಡು ಕಂಬಗಳು ಮತ್ತು ಸಾದಾ ಕೆತ್ತನೆಯಿಂದ ಕೂಡಿದ ಪ್ರವೇಶದ್ವಾರವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಈ ಅಧಿಷ್ಠಾನ ಭಾಗದಲ್ಲಿ ಉಪಾನ, ಜಗತಿ, ಕುಮುದಪಟ್ಟಿಕೆಗಳಿಂದ ಕೂಡಿದೆ.

ಭಿತ್ತಿಯ ಮೇಲೆ ಅರ್ಧಗಂಭಗಳು, ಪಶ್ಚಿಮ ಭಾಗದ ಗೋಡೆಯ ಮೇಲೆ ಸಮಭಂಗಿಯಲ್ಲಿ ನಿಂತ ಜೈನ ತೀರ್ಥಂಕರ ಶಿಲ್ಪ, ಮೇಲ್ಭಾಗ, ಮಯೂರ ಸಾಲು ಇವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಜೈನ ಬಸದಿಯಾಗಿದ್ದು ನಂತರದ ಕಾಲಾವಧಿಯಲ್ಲಿ ಶೈವ ದೇವಾಲಯವಾಗಿ ರೂಪುಗೊಂಡಿದೆ. ದೇವಾಲಯದ ಮುಂದಿರುವ ತೀರ್ಥಂಕರ ಮತ್ತು ಯಕ್ಷಿಯ ವಿಗ್ರಹಗಳು, ಗೋಡೆಯ ಮೇಲಿರುವ ತೀರ್ಥಂಕರ ವಿಗ್ರಹ ಹಾಗೂ ಅಲ್ಲಿಯ ಸಿಂಹಪೀಠಗಳಿಂದ ಇದು ಜೈನ ಬಸದಿಯಾಗಿತ್ತೆಂದು ಹೇಳಬಹುದು.[೫]

- **ದುರ್ಗೇಶ್ವರ ದೇವಾಲಯ**

**ಗ್ರಾಮ** :– **ಕುಡತಿನಿ**

**ಕಾಲ** :– ಕ್ರಿ.ಶ.ಸು ೧೨ನೆಯ ಶತಮಾನ

**ಶೈಲಿ** :– **ಕಲ್ಯಾಣ ಚಾಲುಕ್ಯ**

**ಸ್ಥಳ** :– **ಗ್ರಾಮದ ಒಳಗೆ**

**ಅಭಿಮುಖ** :– **ಪೂರ್ವ**

**ಸ್ಥಿತಿ** :– **ಕನಿಷ್ಠ**

ಕುಡುತಿನಿ ಪಟ್ಟಣದ ಮಧ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿದೆ. ೧೦ ಅಡಿ ಎತ್ತರದ ಜಗತಿಯ ಮೇಲೆ ಈ ದೇವಾಲಯ ನಿರ್ಮಾಣವಾಗಿದ್ದು ಕಾಲಾನಂತರದಲ್ಲಿ ಮುಸ್ಲಿಂ ಪ್ರಭಾವದಿಂದ ಮಸಿದಿಯನ್ನಾಗಿ ಪರಿವರ್ತಿಸಲಾಗಿದೆ. ಅಂತರಾಳ ಮತ್ತು ಗರ್ಭಗೃಹ ನಾಶವಾಗಿದ್ದು ಕೇವಲ ಸಭಾಮಂಟಪ ಮಾತ್ರ ಉಳಿದಿದೆ. ಈ ದೇವಾಲಯದ ಕೆಲವು ಕಂಬಗಳು ಕೆಳಭಾಗ ಚೌಕಾಕಾರ ಮೇಲೆ ವೃತ್ತಾಕಾರವಾಗಿ, ಫಲಕ ಬೋದಿಗೆಗಳನ್ನು ಮಾತ್ರ ಹೊಂದಿದೆ. ಇದು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದಾಗಿದೆ.[೬]

- **ಸಂಗಮೇಶ್ವರ ದೇವಾಲಯ**

**ಗ್ರಾಮ** :– **ಕುಡತಿನಿ**
**ಕಾಲ** :– ಕ್ರಿ.ಶ.ಸು ೧೨ನೆಯ ಶತಮಾನ

**ಶೈಲಿ** :– **ಕಲ್ಯಾಣ ಚಾಲುಕ್ಯ**

**ಸ್ಥಳ** :– **ಗ್ರಾಮದ ಒಳಗೆ**

**ಅಭಿಮುಖ** :– **ಪೂರ್ವ**

**ಸ್ಥಿತಿ** :– **ಮಧ್ಯಮ**

ಈ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದ್ದು, ಎತ್ತರವಾದ ಜಗತಿಯ ಮೇಲೆ ನಿರ್ಮಾಣವಾಗಿದೆ. ತೆರೆದ ಸಭಾ ಮಂಟಪವಿದ್ದು ಅಂತರಾಳ ಮತ್ತು ಗರ್ಭಗೃಹಗಳನ್ನು ಹೊಂದಿದೆ. ಪದ್ಮ ಬಳ್ಳಿಯ ಸಾಲು, ವೃತಾಕಾರದ ಅರ್ಧಗಂಬ, ಸಿಂಹಗಳ ಸಾಲು ಗರ್ಭಗೃಹದ ಪ್ರವೇಶದ್ವಾರದಲ್ಲಿವೆ. ದ್ರಾವಿಡ ಮಾದರಿಯ ಶಿಖರಗಳು ಮತ್ತು ಎರಡು ಭಾಗದಲ್ಲಿ ದ್ವಾರಪಾಲಕರ ವಿಗ್ರಹಗಳಿವೆ. ದ್ವಾರಪಾಲಕರ ಕೈಗಳಲ್ಲಿ ಶಂಖ, ಚಕ್ರ ಮತ್ತು ಅಭಯ ಮುದ್ರೆ, ಗದಾ ಇರುವುದನ್ನು ಕಾಣುತ್ತವೆ. ಇತ್ತೀಚಿಗೆ ಇಲ್ಲಿ ಈಶ್ವರಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

**೩.೧.೨ ಲೌಕಿಕ**

ಕೆರೆ, ಕೋಟೆ, ಬಾವಿ ಮುಂತಾದ ಕಟ್ಟಡಗಳನ್ನು ಲೌಕಿಕ ಕಟ್ಟಡಗಳೆಂದು ಕರೆಯುತ್ತೇವೆ. ಜನ ಸಾಮಾನ್ಯರ ವಾಸಸ್ಥಾನದ ಕಟ್ಟಡಗಳನ್ನು ಸಹ ಲೌಕಿಕ ಕಟ್ಟಡಗಳಾಗಿದ್ದು ಈ ಕುಡತಿನಿ ಪ್ರದೇಶದ ಲೌಕಿಕ ಕಟ್ಟಡಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

- **ಹಾಲು ಬಾವಿ**

ಗ್ರಾಮದ ಮಧ್ಯಭಾಗದಲ್ಲಿದ್ದು ಹಾಲುಬಾವಿ ಆಂಜನೇಯ ದೇವಸ್ಥಾನದ ಹಿಂಬದಿಯಲ್ಲಿದೆ. ಈ ಬಾವಿ ಇಲ್ಲಿನ ಜನರ ಕುಡಿಯುವ ನೀರಿನ ಆಸರೆಯಾಗಿತ್ತು. ಇದಕ್ಕೆ ಹಾಲು ಬಾವಿ ಎಂದು ಹೆಸರು ಬರಲು ಹಾಲಿನಂತಹ ತಿಳಿಯಾದ ಕುಡಿಯುವ ನೀರನ್ನು ಹೊಂದಿದ ಕಾರಣ ಈ ಹೆಸರು ಬಂದಿತು. ಇಂದು ಇದು ಪೂರ್ತಿಯಾಗಿ ಬತ್ತಿ ಹೋಗಿದ್ದು, ಈ ಬಾವಿಯು ನಾಶದ ಅಂಚಿನಲ್ಲಿದೆ.

- **ಸಿಹಿ ನೀರು ಬಾವಿ**

ಈ ಬಾವಿಯು ಗ್ರಾಮದ ಮಧ್ಯಭಾಗದಲ್ಲಿದ್ದು, ಇಡೀ ಗ್ರಾಮಕ್ಕೆ ಪ್ರಾಚೀನ ಕಾಲದಲ್ಲಿ ಕುಡಿಯುವುದಕ್ಕೆ ಮಾತ್ರ ಈ ಬಾವಿಯ ನೀರನ್ನು ಉಪಯೋಗಿಸಲಾಗುತ್ತಿತ್ತು. ಇದು ಬ್ರಾಹ್ಮಣರಿಗಾಗಿ ಪ್ರತ್ಯೇಕವಾಗಿ ಕೇವಲ ಅವರ ಬಳಕೆಗೆ ಮಾತ್ರ ಸೀಮಿತವಾಗಿತ್ತು, ಹೊಲೆಯರು ಅಥವಾ ಕೆಳಸ್ತರದ ಜನರು ನೀರಿಗಾಗಿ ಬಂದಲ್ಲಿ ಮೇಲ್ಜಾತಿಯವರು ಬಿಂದಿಗೆ ತುಂಬಿ ದೂರದಿಂದಲೇ ನೀರನ್ನು ಎರೆಯಲಾಗುತ್ತಿತ್ತು.

- **ಗಾಲಿ ಬಾವಿ**

ಪ್ರಸ್ತುತ ಈ ಬಾವಿಯನ್ನು ಗ್ರಾಮದ ಕುಂಬಾರ ಬೀದಿಯಲ್ಲಿ ಕಾಣಬಹುದು. ಸುಮಾರು ೧೨ ಸೇದುವ ಗಾಲಿಗಳನ್ನು ಹೊಂದಿದ್ದು ಪ್ರಾಚೀನ ಕಾಲದಲ್ಲಿ ಈ ಬಾವಿಯ ನೀರನ್ನು ಕೇವಲ ಉಪಯೋಗಕ್ಕಾಗಿ ಬಳಸುತ್ತಿತ್ತು. ಇದರ ಒಳಗಿನ ಕಟ್ಟಡವು ಬಹಳ ಅದ್ಭುತವಾಗಿದ್ದು, ಸುಮಾರು ೪ ರೀತಿಯಲ್ಲಿ ಕಲ್ಲಿನಿಂದ ಸುಸಂಬದ್ಧವಾಗಿ ನಿರ್ಮಿಸಲಾಗಿದೆ. ಇದೂ ಸಹ ಬತ್ತಿ ಹೋಗಿದೆ. ಇಂದು ಜನರು ತ್ಯಾಜ್ಯವಸ್ತುಗಳನ್ನು ಹಾಕುವ ತಿಪ್ಪೆಯಾಗಿ ಬಳಸುತ್ತಿರುವುದು ಶೋಚನೀಯ ಸಂಗತಿಯಾಗಿದೆ. ಈ ಬಾವಿಯು ಸ್ವಲ್ಪ ಅಂತರದಲ್ಲಿ ಒಂದು ಶಾಸನವಿದ್ದು ಅದು ಇಂದು ಚರಂಡಿಯ ಪಕ್ಕದಲ್ಲಿ ಸೇರಿದ್ದು ರಕ್ಷಣೆ ಮಾಡಬೇಕಾಗಿದೆ. ಇತಿಹಾಸವನ್ನು ತಿಳಿಸುವಲ್ಲಿ ಈ ಶಾಸನಗಳೇ ಮುಖ್ಯ ಆಧಾರಗಳಾಗಿದ್ದು ಅಳಿವಿಂಚಿನಲ್ಲಿವೆ ಸಂರಕ್ಷಣೆ ಮಾಡಲು ಊರಿನ ಜನರು ಅಥವಾ ವಿಶ್ವವಿದ್ಯಾಲಯ ಅಥವಾ ವಸ್ತು ಸಂಗ್ರಹಾಲದ ಜವಾಬ್ದಾರಿ ತೆಗೆದುಕೊಂಡಲ್ಲಿ ಮುಂದಿನ ಪೀಳಿಗೆಗೆ ಅನುಕೂಲಕರ.

- **ಜಕ್ಕೇರು ಬಾವಿ**

ಈ ಬಾವಿಯು ಗ್ರಾಮದ ಮಧ್ಯಭಾಗದಲ್ಲಿದೆ. ಈ ಬಾವಿಯನ್ನು ಅಂದಿನ ಜನರು ಕುಡಿಯುವುದಕ್ಕೆ ಮತ್ತು ಬಳಕೆಗೆ ಕೂಡ ಬಳಸಲಾಗುತ್ತಿತ್ತು. ಪ್ರಸ್ತುತ ಬಾವಿಯು ಬತ್ತಿ ಹೋಗಿದೆ.

- **ಪಾಂಡುರಂಗಪ್ಪ ಬಾವಿ**

ಪ್ರಸ್ತುತ ಈ ಬಾವಿಯು ಕುಡತಿನಿಯಿಂದ ಕಂಪ್ಲಿಗೆ ಹೋಗುವ ಮಾರ್ಗದಲ್ಲಿದೆ. ಈ ಬಾವಿಯ ಹೂಳಿನಿಂದ ಮುಚ್ಚಲ್ಪಟ್ಟಿದೆ. ಕೇವಲ ಅದರ ಮೇಲ್ಭಾಗವನ್ನು ಮಾತ್ರ ಕಾಣಬಹುದು.

- **ವಿಭೂತಿ ಬಾವಿ**

ಈ ಬಾವಿಯು ಗ್ರಾಮದ ಸಂಗಮೇಶ್ವರ ದೇವಾಲಯದ ಪಕ್ಕದಲ್ಲಿದ್ದು, ಈ ವಿಭೂತಿ ಬಾವಿಯ ನೀರನ್ನು ಅಂದಿನ ಜನರು ಕೇವಲ ಉಪಯೋಗಕ್ಕಾಗಿ ಬಳಸಲಾಗುತ್ತಿತ್ತು. ಇಂದು ಈ ಬಾವಿಯು ಸಹಾ ಬತ್ತಿ ಹೋಗಿದೆ. ಅನೇಕ ಜನರು ಇಂದಿಗೂ ಇಲ್ಲಿ ಪೂಜೆ ಸಲ್ಲಿಸುತ್ತಿದ್ದರೂ, ಬಾವಿಗೆ ವ್ಯರ್ಥ ಪದಾರ್ಥಗಳನ್ನು ಹಾಕುತ್ತಿರುವುದರಿಂದ. ಬಾವಿಯನ್ನು  ವಿನಾಶದ ಅಂಚಿನಲ್ಲಿದೆ.

## ೩.೨ ಮೂರ್ತಿಶಿಲ್ಪ

ಭಾರತದಲ್ಲಿ ದೇವತಾರಾಧನೆ, ದೇವಾಲಯಗಳ ನಿರ್ಮಾಣ ಪ್ರಾರಂಭವಾದ ದಿನದಿಂದ ಮೂರ್ತಿಗಳ ಪ್ರತಿಷ್ಠಾಪನೆ ಮತ್ತು ಆರಾಧನೆ ನಡೆದುಕೊಂಡು ಬಂದಿದೆ. ಯಾವುದೇ ಪಂಥದ ದೇವಾಲಯವಿರಲಿ, ಆ ದೇವಾಲಯಕ್ಕೊಂದು ದೇವತಾಮೂರ್ತಿ ಇರುತ್ತದೆ. ಈ ರೀತಿಯ ಮೂರ್ತಿಗಳನ್ನು ಕುರಿತು ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಶಾಸ್ತ್ರವನ್ನು ಮೂರ್ತಿಶಿಲ್ಪಶಾಸ್ತ್ರ ಎಂದು ಕರೆಯುವರು. ಮೂರ್ತಿ ಪದಕ್ಕೆ ಸಮಾನಾರ್ಥಕವಾಗಿ ಪ್ರತಿಮೆ ಪದ ಪ್ರಯೋಗದಲ್ಲಿದೆ. ಅಲ್ಲದೆ ಮೂರ್ತಿಶಿಲ್ಪಶಾಸ್ತ್ರವನ್ನು ಪ್ರತಿಮಾಶಾಸ್ತ್ರ ಎಂದು ಕರೆಯಲಾಗಿದೆ. ಮೂರ್ತಿಯನ್ನು ಪ್ರಮಾಣಬದ್ಧವಾಗಿ ಹೇಗೆ ಹಿಡಿಯಬೇಕೆಂಬುದನ್ನು ತಿಳಿಸುವ ಶಾಸ್ತ್ರ. ಶಾಸ್ತ್ರೀಯ ನಿರೂಪಣೆ ಪ್ರಕಾರ ಮೂರ್ತಿಯು ಒಂಭತ್ತು ಅಂಗಗಳನ್ನು ಒಳಗೊಂಡಿರುತ್ತದೆ. ನ್ಯಾಸ (ರೂಪ ಸಂಯೋಜನೆ), ಅಲಂಕಾರ (ಆಭರಣ, ವಸ್ತ್ರ, ಕೇಶ), ಮುದ್ರಾ (ಹಸ್ತ ಮುದ್ರೆಗಳು), ಆಯುಧ (ದೇವತೆಯ ಕೈ ಯಲ್ಲಿರುವ ಆಯುಧಗಳು), ಭಾಫ್ರಕಕ್ಷ (ಆಸನ), ವಾಹನ, ಉಪದೇವ (ಪ್ರಧಾನ ಪುರುಷ ದೇವತೆಗಳ ಸಂದರ್ಭದಲ್ಲಿ ಸ್ತ್ರೀ ದೇವತೆಗಳು), ಅರಿ (ದೇವತೆಯ ವೈರಿ), ಸ್ತುವಕ (ಭಕ್ತರು ಹಾಗೂ ಇತರ ಸೇವಕರು).[೮]

ಈ ಮೂರ್ತಿಶಿಲ್ಪಗಳನ್ನು ಶೈವ ಶಿಲ್ಪ, ವೈಷ್ಣವ ಶಿಲ್ಪ, ಶಾಕ್ತ ಶಿಲ್ಪ, ಜೈನ ಶಿಲ್ಪಗಳೆಂದು ವರ್ಗೀಕರಿಸಬಹುದಾಗಿದೆ.

- **ಶೈವ ಶಿಲ್ಪಗಳು**

ಮೂರ್ತಿಶಿಲ್ಪಗಳಲ್ಲಿ ಇದು ಒಂದು ಪ್ರಕಾರದ ಮೂರ್ತಿಶಿಲ್ಪವಾಗಿದ್ದು, ಈ ಶೈವ ಶಿಲ್ಪಗಳಲ್ಲಿ ಶಿವ, ಗಣೇಶ, ವೀರಭದ್ರ, ಭೈರವ, ಸೂರ್ಯ, ಸ್ಕಂದ, ನಂದಿ ಶಿಲ್ಪಗಳನ್ನು ಶೈವ ಶಿಲ್ಪಗಳೆಂದು ಕರೆಯಬಹುದು.

- **ವಿನಾಯಕ**

ಈ ಗ್ರಾಮದ ಮಧ್ಯಭಾಗದಲ್ಲಿ ವಿನಾಯಕನ ಸುಮಾರು ೪ ಅಡಿ ಎತ್ತರದ ವಿನಾಯಕನ ಮೂರ್ತಿಶಿಲ್ಪವನ್ನು ಕಾಣಬಹುದು. ಈ ಮೂರ್ತಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಮೊದಕ ಪಾತ್ರೆ, ಸೊಂಡಿಲನ್ನು ಕೈಯಲ್ಲಿ ಹಾಕಿರುವಂತೆ

ಮತ್ತು ದೊಡ್ಡ-ದೊಡ್ಡ ಕಿವಿಗಳನ್ನು ಕಾಣಬಹುದು. ಇದು ಮುಖ್ಯ ಚರ್ತುಭುಜ ವಿನಾಯಕ ಮೂರ್ತಿಯಾಗಿದ್ದು ಈತನ ವಾಹನವಾದ ಇಲಿಯನ್ನು ಸಹ ಚಿಕ್ಕದಾಗಿ ಕೆತ್ತಲಾಗಿದೆ.

- **ಶಿವ**

ಈ ಕುಡತಿನಿ ಗ್ರಾಮದ ದೇವಾಲಯಗಳಲ್ಲಿ ನಿರಾಕಾರ ರೂಪದ ಶಿವಲಿಂಗಗಳನ್ನು ಎಲ್ಲೆಡೆ ಕಾಣುತ್ತೇವೆ. ಪ್ರಾಚೀನ ಹಾಗೂ ಅರ್ವಾಚೀನ ಲಿಂಗಗಳ ನಡುವಿನ ವ್ಯತ್ಯಾಸ ಗುರುತಿಸುವುದು ಕಷ್ಟಸಾಧ್ಯವಾಗಿದೆ. ಆದರೂ ಸಹ ಪ್ರತಿಯೊಂದು ಲಿಂಗಕ್ಕೂ ಸಹ ಪ್ರತ್ಯೇಕವಾದ ಹೆಸರನ್ನು ಹೊಂದಿದ್ದನ್ನು ಕಾಣಬಹುದು. ಈಶ್ವರ ದೇವಸ್ಥಾನ, ನೀಲಕಂಠೇಶ್ವರ, ಸಂಗಮೇಶ್ವರ ಇನ್ನು ಮುಂತಾದ ಲಿಂಗಗಳು ಚೌಕಾಕಾರದ ಕಲ್ಲು ಬಂಡೆಗಳಂತಿದ್ದು ಅವುಗಳ ಮಧ್ಯೆ ಚಿಕ್ಕದಾಗಿ ಲಿಂಗ ಭಾಗವಿರುತ್ತದೆ. ಹೀಗೆ ಶೈವ ಶಿಲ್ಪಗಳಲ್ಲಿ ಲಿಂಗದ ಪಾತ್ರ ಮಹತ್ವದಾಗಿದೆ.

- **ಶೈವ ದ್ವಾರಪಾಲಕರು**

ದ್ವಾರಪಾಲಕರನ್ನು ಆಯಾ ಮುಖ್ಯದೇವರ ಸೇವಕರೆಂದು ಕರೆಯಲಾಗುತ್ತದೆ. ಮುಖ್ಯವಾಗಿ ದ್ವಾರಪಾಲಕರನ್ನು ಗಮನಿಸಿದಾಗ ಅಭಯ ಹಸ್ತ, ವರದ ಹಸ್ತ ಮತ್ತು ಕೈಗಳಲ್ಲಿ ತ್ರಿಶೂಲ, ಡಮರುಗ ಹಿಡಿದಿರುವ ದ್ವಿಭುಜ ಇಲ್ಲವೇ ಚರ್ತುಭುಜವುಳ್ಳ ಶೈವ ದ್ವಾರಪಾಲಕರು ಸಾಮಾನ್ಯವಾಗಿ ಕಂಡು ಬರುವರು. ಕೊರಳಲ್ಲಿ ಕಂಠಹಾರ, ಮಣಿಸರಗಳಿಂದ ಅಲಂಕೃತವಾದ ಉಡುಪು, ಕಾಲ್ಗಡಗ, ಪಾದರಸಗಳನ್ನು ಈ ಶೈವ ದ್ವಾರಪಾಲಕರಲ್ಲಿ ಕಾಣಬಹುದಾಗಿದೆ. ಈ ಕುಡುತಿನಿ ಪರಿಸರದಲ್ಲಿ ಕಂಡು ಬರುವ ಶೈವ ದೇವಾಲಯದ ದ್ವಾರಪಾಲಕರನ್ನು ಗಮನಿಸಿದಾಗ ವಿಶೇಷವಾಗಿ ಬಲಗಾಲಿನ ಮೇಲೆ ದೇಹದ ಭಾರವನ್ನೆಲ್ಲಾ ಬಿಟ್ಟು ಸ್ಥಾನಿಕವಾಗಿರುವ ಮೂರ್ತಿಯು ಮೇಲಿನ ಎಡ ಬಲದಲಿ ತ್ರಿಶೂಲ ಮತ್ತು ಡಮರುಗವನ್ನು ಹೊಂದಿದ್ದು ಬಲಗೈಯಲ್ಲಿ ಗದೆಯನ್ನು ಹಿಡಿದಿರುವ ಹಾಗೂ ಎಡಗೈಯ ಅಭಯ ಹಸ್ತ ಮುದ್ರೆಯಲ್ಲಿರುವುದು ಮೂರ್ತಿಯ ವಿಶೇಷತೆಯಾಗಿದೆ.

- **ವೈಷ್ಣವ ಶಿಲ್ಪಗಳು**

ಮೂರ್ತಿಶಿಲ್ಪಗಳಲ್ಲಿ ಈ ವೈಷ್ಣವ ಶಿಲ್ಪಗಳು ಮುಖ್ಯವಾಗಿದ್ದು ವಿಷ್ಣುವಿನ ಅವತಾರಗಳಾದ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಶ್ರೀಕೃಷ್ಣ, ಬುದ್ಧ, ಕಲ್ಕಿ ಅವತಾರಗಳಾಗಿದ್ದು, ಮುಖ್ಯವಾಗಿ ಕೈಗಳಲ್ಲಿ ಶಂಖ, ಚಕ್ರ, ಗದ, ಪದ್ಮವನ್ನು ಹೊಂದಿದ್ದು, ಕಿರೀಟ

ಮಕುಟ, ಕಂಠಾಭರಣ, ಮಕರ ಕುಂಡಲ, ಯಜ್ಞೋಪವಿತ, ದೋತಿ ಹಾಗೂ ಕೈಕಡಗವನ್ನು ಹೊಂದಿದ್ದು ಸಮಭಂಗಿಯಲ್ಲಿ ನಿಂತಿದ್ದು ಚತುರ್ಭುಜಗಳಿರುತ್ತವೆ.

- **ವೆಂಕಟೇಶ್ವರ**

ಹಿಂದೂ ದೇವಾನು-ದೇವತೆಗಳಲ್ಲಿ ಪ್ರಸ್ತುತ ಕಲಿಯುಗದ ಅವತಾರ ಎಂದು ಕರೆಯುವ ವೆಂಕಟೇಶ್ವರ ಮೂರ್ತಿಯು ಮಹಾವಿಷ್ಣುವಿನ ಒಂದು ರೂಪವಾಗಿದ್ದು, ಈ ಕುಡತಿನಿ ಗ್ರಾಮದ ಮಧ್ಯಭಾಗದಲ್ಲಿ ಇತ್ತೀಚಿಗೆ ಈ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಸೂಕ್ಷ್ಮವಾಗಿ ಈ ಶಿಲ್ಪವನ್ನು ಗಮನಿಸಿದಾಗ ಎಡಗೈಯಲ್ಲಿ ಶಂಖ, ಬಲಗೈಯಲ್ಲಿ ಚಕ್ರವನ್ನು ಹಿಡಿದಿದ್ದು ಇವುಗಳು ಪುರಾಣಗಳ ಪ್ರಕಾರ ಶ್ರೀದೇವಿ ಮತ್ತು ಭೂದೇವಿಯವರ (ವೆಂಕಟೇಶ್ವರನ ಮಡದಿಯರು) ಸಂಕೇತ ಎಂದು ಪ್ರತಿಬಿಂಬಿಸಿದ್ದು ಇದನ್ನು ಈ ಮೂರ್ತಿಶಿಲ್ಪದಲ್ಲಿ ಅದ್ಭುತವಾಗಿ ಕೆತ್ತಲಾಗಿದೆ. ಕಿರೀಟ ಮುಕುಟವನ್ನು ಧರಿಸಿದ್ದು ಸ್ಥಾನಿಕ ಭಂಗಿಯಲ್ಲಿರುವುದನ್ನು ಕಾಣಬಹುದು. ಚತುರ್ಭುಜಗಳನ್ನು ಹೊಂದಿರುವನು. ಶಂಖ, ಚಕ್ರ, ವರದಾ ಹಸ್ತವನ್ನು ಈ ಮೂರ್ತಿಯಲ್ಲಿ ಕಾಣಬಹುದಾಗಿದೆ.

- **ಶಾಕ್ತ ಶಿಲ್ಪಗಳು**

ಈ ಶಾಕ್ತ ಶಿಲ್ಪಗಳಲ್ಲಿ ಪಾರ್ವತಿ, ಮಹಿಷ ಮರ್ದಿನಿ, ಲಕ್ಷ್ಮೀ, ಸಪ್ತಮಾತೃಕೆಯರು, ದೇವತೆಗಳನ್ನು, ಹಲವಾರು ಪರಿವಾರ ದೇವತೆಗಳನ್ನು ಶಾಕ್ತ ಶಿಲ್ಪಗಳೆಂದು ಕರೆಯುತ್ತೇವೆ.

- **ಸಪ್ತಮಾತೃಕೆಯರು**

ಸಪ್ತಮಾತೃಕೆಯರು ಮುಖ್ಯವಾಗಿ ಆ ಪ್ರದೇಶದ ಅಥವಾ ಆ ಊರಿನ ಹೆಸರನ್ನು ಪಡೆದ ದೇವತೆಗಳಾಗಿ ಎಲ್ಲ ವರ್ಗದ ಜನರಿಂದ ಪೂಜೆಗೊಳ್ಳುವವರಾಗಿರುತ್ತಾರೆ. ಅನೇಕ ವೇಳೆ ಶೈವ ದೇವಾಲಯದ ಪರಿವಾರ ದೇವತೆಗಳಾಗಿ ಕೆಲವೊಮ್ಮೆ ಸ್ವತಂತ್ರವಾಗಿ ಪೂಜೆಗೊಳ್ಳುತ್ತಿದ್ದಾರೆ. ಇವರನ್ನು ಕನ್ಯೆಯರೆಂದೂ, ಅಮ್ಮನವರೆಂದು ಕರೆಯುವುದು ವಾಡಿಕೆ. ಮೂರ್ತಿಶಿಲ್ಪಗಳ ಗಾತ್ರ ಮತ್ತು ಅಂಗಂಗಗಳ ವಿನ್ಯಾಸವು ಕಲ್ಲಿನ ಅಳತೆ, ಆಕಾರವನ್ನು ಅವಲಂಬಸಿರುತ್ತದೆ. ಚಾಮುಂಡಿಯನ್ನುಳಿದು ಇತರ ವಿಗ್ರಹಗಳು ಒಂದು ಅಥವಾ ಒಂದೂವರೆ ಅಡಿ ಎತ್ತರದ ವಿಗ್ರಹಗಳಾಗಿರುತ್ತಿವೆ. "ರಕ್ತ ಬೀಜನೊಡನೆ ಕೌಶಿಕದುರ್ಗ ಹೋರಾಟ ಮಾಡುತ್ತಿರುವಾಗ ಅಸುರನ ರಕ್ತ ನೆಲಕ್ಕೆ ಬಿದ್ದ ತಕ್ಷಣ ಮತ್ತೊಬ್ಬ ರಕ್ತ ಬೀಜಾಸುರ ಜನಿಸಿ ದೇವಿಯೊಡನೆ

ಹೋರಾಟಕ್ಕಿಳಿಯುತ್ತಿದ್ದ ಸಂದರ್ಭದಲ್ಲಿ ದೇವಿಯು ತನ್ನ ಸಹಾಯಕ್ಕಾಗಿ ಏಳು ಜನ ದೇವಿಯರನ್ನು ಸೃಷ್ಟಿಸಿದಳು. ಆ ಏಳು ಜನರೇ ಸಪ್ತಮಾತೃಕೆಯರೆಂದು ಕರೆಯುತ್ತೇವೆ.

ಕುಡುತಿನಿ ಗ್ರಾಮದ ಮಧ್ಯ ಭಾಗದಲ್ಲಿರುವ ಈಶ್ವರ ದೇವಾಲಯದಲ್ಲಿ ಈ ಸಪ್ತ ಮಾತೃಕೆಯರ ಶಿಲ್ಪಗಳನ್ನು ಕಾಣಬಹುದು. ಇದರಲ್ಲಿ ಬ್ರಾಹ್ಮಿಣಿ, ವೈಷ್ಣವಿ, ಮಹೇಶ್ವರಿ, ಇಂದ್ರಾಣಿ, ಕೌಮರಿ, ವರಾಹಿ, ಚಾಮುಂಡಿ ದೇವತೆಗಳಿದ್ದು ಇವರನ್ನು ಮುಖ್ಯವಾಗಿ ಇವರು ಹೊಂದಿದ ವಾಹನಗಳ ಮುಖಾಂತರ ಗುರುತಿಸಬಹುದಾಗಿದೆ. ಅವುಗಳು

ಬ್ರಾಹ್ಮಿಣಿ – ಹಂಸ

ವೈಷ್ಣವಿ – ಗರುಡ

ಮಹೇಶ್ವರಿ – ನಂದಿ

ಇಂದ್ರಾಣಿ – ಆನೆ

ಕೌಮರಿ – ನವಿಲು

ವರಾಹಿ – ವರಾಹ

ಚಾಮುಂಡಿ – ಸಿಂಹ

ಹೀಗೆ ಏಳು ಜನ ದೇವಿಯರನ್ನು ಕಾಣಬಹುದಾಗಿದೆ. ಇವರನ್ನೇ ಸಪ್ತ ಮಾತೃಕೆಯರು ಎಂದು ಕರೆಯುತ್ತೇವೆ.

- **ಇತರೆ ಶಿಲ್ಪಗಳು**

- **ಮದನಿಕೆಯ ಶಿಲ್ಪ**

ಈ ಗ್ರಾಮದ ಜಕ್ಕೇರು ಬಾವಿಯ ಹತ್ತಿರ ಕೇವಲ ಒಂದು ಕಲ್ಲಿನಲ್ಲಿ ಕೆತ್ತಿರುವ ಮದನಿಕೆಯ ಶಿಲ್ಪ ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಬಂದಿದೆ. ಈ ಶಿಲ್ಪವನ್ನು ವೀಕ್ಷಿಸಿದಾಗ ಕೈಯಲ್ಲಿ ಬಾಣವನ್ನು ಬಿಡುವ ಸಂದರ್ಭವಿದ್ದು ತನ್ನ ಲಾವಣ್ಯವನ್ನು ಪ್ರದರ್ಶಿಸುವಂತೆ ಕಂಡು ಬರುತ್ತಿರುವುದನ್ನು ಈ ಶಿಲ್ಪದಲ್ಲಿ ಕಾಣಬಹುದು.

- **ನಾಗರ ಮೂರ್ತಿ ಶಿಲ್ಪ**

ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡು ಬರುವುದು ನಾಗರ ಶಿಲ್ಪಗಳಾಗಿದ್ದು, ನಾಗರವಂಶಸ್ಥರೆಂದು ಶಾಸನಗಳ ಉಲ್ಲೇಖವು ಇದೆ. ಪ್ರತೀ ದೇವಸ್ಥಾನದಲ್ಲಿ ನಾಗರ ಕಲ್ಲಿನ ಮೂರ್ತಿಗಳನ್ನು ಕಾಣಬಹುದು, ಮುಖ್ಯವಾಗಿ ದೊಡ್ಡ ಆಂಜನೇಯ, ಕುಮಾರಸ್ವಾಮಿ ದೇವಾಲಯ ಹಾಗೂ ಬೋಳು ಬಸವನ ದೇವಾಲಯಗಳಲ್ಲಿ ಹೆಚ್ಚು ಪ್ರಮಾಣ ನಾಗರ ಮೂರ್ತಿ ಶಿಲ್ಪಗಳಿವೆ.

**ಕೊನೆ ಟಿಪ್ಪಣಿಗಳು**

೧. ಸುರೇಶ ಕೆ.ಎಂ., ೧೯೯೯, ಕರ್ನಾಟಕ ದೇವಾಲಯ ಕೋಶ, ಪು.೧೧.

೨. ಅದೇ, ಪು.೧೨.

೩. ವಾಸುದೇವ ಬಡಿಗೇರ, ೧೯೯೭, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಿಕ ಅಧ್ಯಯನ, ಪು.೫೮.

೪. ಅದೇ, ಪು.೫೯.

೫. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಿಸರ, ಪು.೨೯೩.

೬. ವಾಸುದೇವ ಬಡಿಗೇರ, ೧೯೯೭, ಪೂರ್ವೋಕ್ತ ಪು.೫೮.

೭. ಅದೇ, ಪು.೫೮-೫೯.

೮. ವಾಸುದೇವ ಬಡಿಗೇರ, ೧೯೯೭, ಪೂರ್ವೋಕ್ತ, ಪು.೩೨೮.

## ೪. ಶಾಸನಗಳು

೪.೧. ಶಾಸನಗಳ ವಿಶ್ಲೇಷಣೆ

೪.೨. ಸಾಮಾಜಿಕ

೪.೩. ಆರ್ಥಿಕ

೪.೪. ಧಾರ್ಮಿಕ

# ಅಧ್ಯಾಯ –ನಾಲ್ಕು

## ಶಾಸನಗಳು

ಪ್ರಾಚೀನ ಕರ್ನಾಟಕದ ಇತಿಹಾಸವನ್ನು ಪುನರಚಿಸುವಲ್ಲಿ ಐತಿಹಾಸಿಕ ಮೂಲ ದಾಖಲೆಗಳಲ್ಲಿ ಒಂದಾದ ಶಾಸನಗಳಿಗೆ ಮಹತ್ವದ ಸ್ಥಾನವಿದೆ. ಈ ಶಾಸನ ಎಂಬ ಶಬ್ದ ಸಂಸ್ಕೃತದ 'ಶಾಸ್' ಎಂಬ ಧಾತುವಿನಿಂದ ಬಂದಿದ್ದು, ಅಪ್ಪಣೆಮಾಡು, ಘೋಷಣೆಯನ್ನು ಹೊರಡಿಸು ಎನ್ನುವ ಅರ್ಥವನ್ನು ಕೊಡುತ್ತದೆ. ಇಂಗ್ಲಿಶ್‌ನಲ್ಲಿ ಇನ್ಸ್‌ಕ್ರಿಪ್ಶನ್ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಕಲ್ಬರಹ ಅಥವಾ ಶಾಸನ ಎಂಬ ಪದಗಳನ್ನು ಬಳಸಲಾಗುತ್ತಿದೆ. ಪ್ರಾರಂಭದಲ್ಲಿ ರಾಜನ ಆಜ್ಞೆ ಎಂಬ ಅರ್ಥವನ್ನು ಪಡೆದಿದ್ದ ಈ ಶಾಸನಗಳು ಕಾಲಕ್ರಮೇಣದಲ್ಲಿ ಬಹುಕಾಲ ಉಳಿಯಬಲ್ಲ ಬರಹದ ದಾಖಲೆಗಳು ಎಂಬ ಅರ್ಥವನ್ನು ಪಡೆದವು.

ಶಾಸನಗಳಲ್ಲಿರುವ ವಿಷಯ ವೈವಿಧ್ಯತೆಯಿಂದ ಆಡಳಿತಗಾರರು ಭೂವಿವರಣೆ, ಧಾರ್ಮಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳ ಬಗ್ಗೆ ಅಧ್ಯಯನ ನಡೆಸಲು ಬಹಳ ಸುಲಭವಾಗಿದೆ. ಶಾಸನಗಳಲ್ಲಿರುವ ಅನೇಕ ವಿಷಯಗಳ ಬಗ್ಗೆ ಚರ್ಚಿಸಲು ಅವಕಾಶವಿದೆ. ಈ ಶಾಸನಗಳು ರಾಜನ ಸಹಿ, ಮುದ್ರೆ, ದಿನಾಂಕಗಳೊಂದಿಗೆ ಅಧಿಕೃತವಾಗಿ ಪ್ರಕಟಗೊಂಡಿವೆ. ಇವು ಶಿಲೆ, ತಾಮ್ರ, ಕಬ್ಬಿಣ ಇತ್ಯಾದಿ ಮಾಧ್ಯಮಗಳಲ್ಲಿ ಬರೆದಿರುವ ರಾಜಾಜ್ಞೆಗಳಿದ್ದಂತೆ ರಾಜರಲ್ಲದವರನ್ನು ಕುರಿತು ಬರೆಸಿದಾಗಲೂ ಅವು ಶಾಸನಗಳೆಂದೇ ಕರೆಯಿಸಿಕೊಂಡವು. ವೀರರು, ಮಹಾಸತಿಯರು, ಸನ್ಯಾಸಿಗಳು ಮುಂತಾದವರ ಮರಣ ವೃತ್ತಾಂತವನ್ನು ಉಲ್ಲೇಖಿಸುವ ಸ್ಮಾರಕ ಶಿಲ್ಪಗಳೂ ಸಹ ಶಾಸನ ಪರಂಪರೆಗೆ ಸೇರಿದವುಗಳಾಗಿವೆ. ಹೀಗೆ ಪ್ರಭುತ್ವ ಪರಿಸರದಲ್ಲಿ ಬೆಳೆದು ಬಂದ ಲಿಖಿತ ದಾಖಲೆಗಳೆನಿಸಿದವು ಈ ಶಾಸನಗಳು.

ಶಾಸನಗಳು ಮೈದಳೆಯುವ ಮೂರು ಹಂತಗಳನ್ನು ಗುರುತಿಸಬಹುದು. ಮೊದಲು ಬರೆಯಬೇಕಾದ ಮಾತುಗಳನ್ನು ಬರಹ ರೂಪದಲ್ಲಿ ಒಂದು ಕಡೆ ಬರೆಯುವ ಹಂತ. ಇದಕ್ಕೆ ಯಾವ ಅಕರವನ್ನು ಬಳಸುತ್ತಿದ್ದರೆಂಬುದು ನಮಗಿನ್ನು ಗೊತ್ತಿಲ್ಲ. ಕೇವಲ ಊಹೆಗಳನ್ನು ಮಾಡಬಹುದು. ಬಳಿಕ ಈ ಲಿಪಿ ರೂಪವನ್ನು ಶಾಸನವು ಮೂಡಬೇಕಾದ ಕಲ್ಲಿನ ಮೇಲೆ ಬರೆಯುವುದು ಎರಡನೆಯ ಹಂತ. ಕೊನೆಯ ಹಂತವೆಂದರೆ ಹೀಗೆ ಬರೆದದ್ದನ್ನು ಹತ್ಯಾರುಗಳ ನೆರವಿನಿಂದ ಕೊರೆಯುವುದು. ಈ ಮೂರೂ ಹಂತಗಳಲ್ಲೂ ಒಬ್ಬರೇ ಇರಬಹುದು. ಇಲ್ಲವೇ ಎರಡೂ ಮತ್ತು ಮೂರನೆಯ ಹಂತದಲ್ಲಿ ಒಬ್ಬರಿದ್ದು ಮೊದಲ ಹಂತದಲ್ಲಿ ಒಬ್ಬರಿರಬಹುದು. ಹಾಗೆಯೇ ಮೊದಲ ಮತ್ತು ಎರಡನೆಯ ಹಂತದ ಕೆಲಸವನ್ನು ಒಬ್ಬರು ಮಾಡಿ ಮುಗಿಸಿದ

ಮೇಲೆ ಮೂರನೆಯ ಹಂತವನ್ನು ಮತ್ತೊಬ್ಬರು ಪೂರೈಸಬಹುದು. ಹಾಗಿಲ್ಲದೆ ಮೂರೂ ಹಂತಗಳಲ್ಲೂ ಬೇರೆ ಬೇರೆಯವರೇ ಮಾಡಬಹುದು.

ಕುಡತಿನಿ ಶಾಸನಗಳನ್ನೇ ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಿದಾಗ ಇಲ್ಲಿ ದಾನ ಶಾಸನಗಳು ಅಧಿಕವಾಗಿರುವುದು ಕಂಡುಬರುತ್ತದೆ. ಅವುಗಳಲ್ಲಿ ಜೀರ್ಣೋದ್ಧಾರ, ನಿರ್ಮಾಣ ಕಾರ್ಯ, ನಿತ್ಯದ ಪೂಜಾ ಕಾರ್ಯಕ್ಕಾಗಿ ಗ್ರಾಮ, ಭೂಮಿ, ಕಾಸು, ಗದ್ಯಾಣ ಮತ್ತು ತೆರಿಗೆಗಳನ್ನು ದಾನವಾಗಿ ನೀಡಿರುವರು. ಹಾಗೆಯೇ ಅಗ್ರಹಾರ, ಕೆರೆ, ಬಾವಿ ಇತ್ಯಾದಿ ಸಾಮಾಜಿಕ ಕಾರ್ಯಗಳಿಗಾಗಿ ದಾನ ನೀಡಿರುವ ವಿವರಗಳಿವೆ. ಹೀಗೆ ಅನೇಕ ಉದ್ದೇಶಗಳಿಗಾಗಿ ಕೊಟ್ಟ ದಾನಗಳ ಕುರಿತು ಈ ಶಾಸನಗಳಲ್ಲಿ ವಿವರಣೆಗಳಿವೆ ಹಾಗೂ ಯುದ್ಧದಲ್ಲಿ ಹೋರಾಡಿ ಜಯಗಳಿಸಿದ ಮತ್ತು ಹೋರಾಡಿ ಮಡಿದ ವೀರರ ಸ್ಮರಣೆಗಾಗಿ ನಿಲ್ಲಿಸಿದ ಸ್ಮಾರಕ ಶಾಸನಗಳನ್ನು ಕಾಣುತ್ತೇವೆ. ಈ ಪ್ರದೇಶದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿರುವ ಶಾಸನಗಳು ದೊರೆತಿದ್ದರೂ ಕನ್ನಡ ಭಾಷೆಯ ಶಾಸನಗಳೇ ಅಧಿಕವಾಗಿವೆ.

ಈವರೆಗೆ ಪ್ರಕಟವಾಗಿರುವ ಪ್ರಮುಖ ಶಾಸನ ಸಂಪುಟಗಳಾದ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧ ಬಳ್ಳಾರಿ ಜಿಲ್ಲೆ, ಕರ್ನಾಟಕ ಶಾಸನ ಸಂಪುಟ–೨, ವಿಜಯನಗರ ಅಧ್ಯಯನ ಸಂಪುಟ–೨, ವಿಜಯನಗರದ (ಹಂಪೆಯ) ಶಾಸನಗಳ ಸಂಪುಟ–೧ರಲ್ಲಿ ಕುಡತಿನಿಗೆ ಸಂಬಂಧಿಸಿದ ಶಾಸನಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ ಹಾಗೂ ಕ್ಷೇತ್ರಕಾರ್ಯದ ಮೂಲಕ ಅವುಗಳನ್ನು ಚರ್ಚಿಸಲಾಗಿದೆ. ಕುಡತಿನಿಯಲ್ಲಿ ಕಂಡುಬರುವ ಒಟ್ಟು ೨೪ ಶಾಸನಗಳು ಕುಡತಿನಿಯ ಇತಿಹಾಸ ರಚನೆಯಲ್ಲಿ ಮಹತ್ವದ ಬೆಳಕನ್ನು ಬೀರುವ ಪ್ರಮುಖ ದಾಖಲೆಗಳಾಗಿವೆ.

**೪.೧ ಶಾಸನಗಳ ವಿಶ್ಲೇಷಣೆ**

ಕುಡತಿನಿ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕಾಲದ ಅನೇಕ ಶಾಸನಗಳು ದೊರೆತಿವೆ. ಈ ಶಾಸನಗಳಲ್ಲಿ ರಾಜಮನೆತನಗಳು, ರಾಜನ ಸಾಧನೆಗಳು, ಜನಸಾಮಾನ್ಯರು ದೇವಾಲಯಗಳಿಗೆ ನೀಡಿದ ದಾನದತ್ತಿಗಳ ಶಾಸನಗಳನ್ನು ಕಾಣಬಹುದಾಗಿದೆ. ಇಂತಹ ಶಾಸನಗಳ ವಿವರಗಳನ್ನು ಈ ಕೆಳಗಿನಂತೆ ಕಾಣಬಹುದು.

೧.

ಸ್ಥಳ : ಕುಮಾರಸ್ವಾಮಿ ದೇವಸ್ಥಾನದ ಜಗಲಿಯಲ್ಲಿರುವ ತುಂಡುಕಲ್ಲಿನ ಮೇಲಿರುವ ಶಾಸನ

ಕಾಲ : ಕ್ರಿ.ಶ. ೬೨೦

ಮನೆತನ : ರಾಷ್ಟ್ರಕೂಟರು

ಅರಸ : ನಿತ್ಯವರ್ಷ (ಮೂರನೆಯ ಇಂದ್ರ)

ಶಾಸನ ವಿಷಯ : ಈ ಶಾಸನವು ತ್ರುಟಿತವಾಗಿದ್ದು ಮುಖ್ಯವಾಗಿ ದಶವರ್ಮನ ತಂದೆ ಚಾಲುಕ್ಯ ಬಲವರ್ಮನ ಬಗ್ಗೆ ತಿಳಿಸುತ್ತದೆ[೧].

೨.

ಸ್ಥಳ : ಊರಿನ ಪ್ರದೇಶದಲ್ಲಿರುವ ಶಾಸನ

ಕಾಲ : ಕ್ರಿ.ಶ. ೯೪೭ ಜುಲೈ ಭಾನುವಾರ

ಮನೆತನ : ರಾಷ್ಟ್ರಕೂಟ

ಅರಸ : ೩ನೇ ಕೃಷ್ಣ

ಶಾಸನ ವಿಷಯ : ಶಕ ೮೭೦ನೆಯ ಕೀಲಕ, ಶ್ರಾವಣ, ಶುದ್ಧ ಪಂಚಮಿ, ಆದಿತ್ಯವಾರವು ಕ್ರಿ.ಶ.೨೫-೭-೯೪೭ರ ಭಾನುವಾರಕ್ಕೆ ಸರಿಹೊಂದುತ್ತದೆ (ಕೀಲಕ ಸಂವತ್ಸರವು ಉತ್ತರಾದಿ ಕಾಲವಾಗಿದೆ). ರಾಷ್ಟ್ರಕೂಟರ ದೊರೆ ಚಲಕೆನಲ್ಲತ ಅಕಾಲವರ್ಷದೇವ (ಕೃಷ್ಣ-೩) ಆಳ್ವಿಕೆಯ ಕಾಲಕ್ಕೆ ಸೇರಿದ್ದು. ಇದರಲ್ಲಿ ಕುರುಗೂಡ ಮಹಾಜನರು ದೇಕಮ್ಮನ ದೇವಾಲಯಕ್ಕೆ ೬೨ ಮತ್ತರು ಭೂಮಿಯನ್ನು ದಾನವಾಗಿ ಕೊಟ್ಟದನ್ನು ಬೇರೊಬ್ಬ ಅಪಹರಿಸಲು ಗಡ್ಡದ ರುದ್ರರಾಸಿಭಟಾ ಎಂಬುವರು ಚಕ್ರವರ್ತಿಯಿಂದ ಕೇಳಿ ಆ ದಾನವನ್ನು ಮರಳಿ ಪಡೆದರು. ಕಾರ್ತಿಕೇಯತಪೋವನಾಧಿಪತಿಯಾದ ಲೋಕಯ್ಯಗಾವುಂಡನು ಇದೇ ದೇವರಿಗೆ ಗಾಣವನ್ನು ದಾನವಾಗಿ ಕೊಟ್ಟನು[೨].

೩.

ಸ್ಥಳ : ಅದೇ (ಕುಮಾರಸ್ವಾಮಿ) ದೇವಾಲಯದ ಕಟ್ಟೆಗೆ ಹಾಸಿರುವ ಕಲ್ಲು

ಕಾಲ : ಕ್ರಿ.ಶ. ೯೭೧ ಫೆಬ್ರವರಿ ೨೩ ಗುರುವಾರ

ಮನೆತನ : ರಾಷ್ಟ್ರಕೂಟ

ಅರಸ : ಕೊಟ್ಟಿಗ

ಶಾಸನ ವಿಷಯ : ಶಕವರ್ಷ ೮೯೩ನೆಯ ಪ್ರಜಾಪತಿ ಸಂವತ್ಸರದ ಪಾಲ್ಗುಣ ತ್ರಯೋದಶಿಯೆಂದು ಅಂದರೆ ಕ್ರಿ.ಶ. ೨೩-೨-೯೭೧ರ ಗುರುವಾರದಂದು ರಾಷ್ಟ್ರಕೂಟರ ದೊರೆ ಕೊಟ್ಟಿಗನ ಆಳ್ವಿಕೆಯ ಕಾಲದ ಈ ಸಂಸ್ಕೃತ ಶಾಸನದಲ್ಲಿ ಭಟ್ಟತಳ ಗ್ರಾಮದ ಗದಾಧರನು ಸ್ಕಂಧನನ್ನು ಪ್ರತಿಷ್ಠಾಪಿಸಿ ಭೂದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ[೩].

೪.

ಸ್ಥಳ : ದುರ್ಗೇಶ್ವರಿ ದೇವಸ್ಥಾನದ ಮುಂದೆ ನಿಲ್ಲಿಸಿರುವ ಕಲ್ಲಿನ ಶಾಸನ

ಕಾಲ : ಕ್ರಿ.ಶ. ೯೭೬ ಫೆಬ್ರವರಿ ೧೮ ಶುಕ್ರವಾರ

ಮನೆತನ : ಚಾಲುಕ್ಯ

ಅರಸ : ಅಹೋಮಲ್ಲ

ಶಾಸನ ವಿಷಯ : (ಕಾರ್ತಿಕೇಯ) – ತಪೋವನದ ಮುಖ್ಯಸ್ಥನಾಗಿದ್ದ ದಂಡಸಾನಿ ಗದಾಧರ ಬ್ರಹ್ಮಚಾರಿ, ಐದು ವರ್ಗಗೋಲು ಮತ್ತು ಹಂಪಣ ಭಟ್ಟೋಪಾಧ್ಯಾಯರ ಸನ್ನಿಧಿಯಲ್ಲಿ ಅರಸನು ಬೈರವ ದೇವರ ಸೇವೆಗೆ ಭೂಮಿ ದಾನ ಮಾಡಿದ್ದನ್ನು ತಿಳಿಸುತ್ತದೆ[೪].

೫.

ಸ್ಥಳ : ಕುಮಾರ ಸ್ವಾಮಿ ದೇವಾಲಯದಲ್ಲಿರುವ ಮುರಿದ ಕಂಬದ ತುಂಡಿನಲ್ಲಿರುವ ಶಾಸನ

ಕಾಲ : ಕ್ರಿ.ಶ. ೯೮೧ ಮಾರ್ಚ್ ೧೭

ಮನೆತನ : -----

ಅರಸ : ಬಾಲಕರಣ

ಶಾಸನ ವಿಷಯ : ತುಂಡು ಶಾಸನ ಶಕವರ್ಷ ೯೦೩, ವೃಷ,ಚೈತ್ರ, ಶು. ೫, ಗುರುವಾರ, ಪುಷ್ಯನಕ್ಷತ್ರ, ಬಾಲಕರಣ, ಶೋಭನ ಯೋಗಕ್ಕೆ ಸರಿಹೊಂದುವ ಕ್ರಿ.ಶ.೧೭-೩-೯೮೧ ರಂದು ಸುಣ್ಣ ಬಳಿಯಲು ಭೂದಾನ ಮಾಡಿದ ಉಲ್ಲೇಖವಿದೆ[೫].

೬.

ಸ್ಥಳ : ಕುಮಾರಸ್ವಾಮಿ ದೇವಾಲಯದ ಮಂಟಪದಲ್ಲಿ ಬಿದ್ದಿರುವ ಶಾಸನ

ಕಾಲ : ಕ್ರಿ.ಶ. ೯೯೬, ಜುಲೈ ೨೩

ಮನೆತನ : ಚಾಲುಕ್ಯ

ಅರಸ : ಆಹವಮಲ್ಲದೇವ

ಶಾಸನ ವಿಷಯ : ತ್ರುಟಿತವಾಗಿರುವ ಈ ಶಾಸನವು ಶಕವರ್ಷ ೯೧೮ನೆಯ ದುರ್ಮುಖಿ ಸಂವತ್ಸರದ ಶ್ರಾವಣ ಶುದ್ಧ ೫ ಯಾಗಿದ್ದು, ಇದು ಕ್ರಿ.ಶ. ೨೩-೦೭-೯೯೬ರ ಗುರುವಾರಕ್ಕೆ ಸರಿಹೊಂದುತ್ತದೆ. ಇದು ಆಹವಮಲ್ಲದೇವನ (ತೈಲ ೨) ಆಳ್ವಿಕೆಯ ಕಾಲದಾಗಿದ್ದು, ಶ್ರೀ

ಸ್ವಾಮಿದೇವರ ತಪೋವನಾಧಿಪತಿಗಳು ಐದು ವರ್ಗದ ಸಂಮುಖದಲ್ಲಿ ತೋಟವನ್ನು ದಾನವಾಗಿ ನೀಡಲಾಗಿದ್ದ ಈ ವಿಷಯವನ್ನು ಒಳಗೊಂಡಿದೆ[೭].

೭.

ಸ್ಥಳ : ಜಕ್ಕೇರಿ ಬಾವಿಯ ಕಟ್ಟೆಯಲ್ಲಿನ ಶಾಸನ

ಕಾಲ : ಕ್ರಿ.ಶ. ೧೦೫೦

ಮನೆತನ : ------

ಅರಸ : ದಂಡಾಸನಿ ದೇವ

ಶಾಸನ ವಿಷಯ : ಶಕ ೯೭೧ನೆಯ ವಿರೋಧಿ, ಫಾಲ್ಗುಣ, ಶು.೧೩ ಎಂದಿದ್ದು, ಇದು ಕ್ರಿ.ಶ. ೭-೨-೧೦೫೦ಕ್ಕೆ ಸರಿಹೊಂದುತ್ತದೆ. ಇದರಲ್ಲಿ ಜಸನಬ್ಬೆ ಎಂಬುವವಳು ಸೋಮೇಶ್ವರದೇವರಿಗೆ ೧೨ ಮತ್ತರು ಹಾಗೂ ೪೫೦ ಕಮ್ಮ ಭೂಮಿಯನ್ನು ಸರ್ವಮಾನ್ಯವಾಗಿ ಕೊಟ್ಟಳು. ಕಾರ್ತಿಕೇಯ ತಪೋವನಾಧಿಕಾರಿಗಳಾದ ದಂಡಾಸನಿದೇವನ ಉಲ್ಲೇಖವಿದೆ[೭].

೮.

ಸ್ಥಳ : ಅದೇ (ಕುಮಾರಸ್ವಾಮಿ ದೇವಾಲಯ) ಸ್ಥಳದಲ್ಲಿ ಕಟ್ಟೆಗೆ ಸೇರಿಸಿರುವ ಶಾಸನ

ಕಾಲ : ಕ್ರಿ.ಶ. ೧೧೯೯ ಜುಲೈ ೨೪ ಭಾನುವಾರ

ಮನೆತನ : ಚಾಲುಕ್ಯ

ಅರಸ : ತ್ರಿಭುವನ ಮಲ್ಲ

ಶಾಸನ ವಿಷಯ : ಚಾಲುಕ್ಯ ವಿಕ್ರಮ ವರ್ಷ ೨೪ನೆಯ ಪ್ರಮಾದಿ ಸಂವತ್ಸರದ ಶ್ರಾವಣಮಾಸದ ಶುದ್ಧ ೫, ಆದಿವಾರಕ್ಕೆ ಸರಿಹೊಂದುವ ಕ್ರಿ.ಶ. ೨೪-೭-೧೧೯೯ರ ಭಾನುವಾರದಂದು ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲದೇವನ ಕಾಲದಲ್ಲಿ, ಕೊಟ್ಟಿತ್ತೊಣೆಯ ಭಗವತಿ ದೇವಿಗೆ ಈ ಮುನ್ನ ಪರಮೇಶ್ವರ ದತ್ತಿಯಾಗಿ ಪಡೆದ ವೃತ್ತಿಯನ್ನು ಹಾಗೂ ಭೂಮಿಯನ್ನು ದಾನವಾಗಿ ಕೊಡಲಾಗಿದೆ[೮]. ಈ ದಾನವನ್ನು ವಿಶ್ವರೂಪ ಬ್ರಹ್ಮಚಾರಿ ಹಾಗೂ ಸ್ಥಾನದ ಐದು ವರ್ಗದ ಪ್ರಮುಖ ಸಜಾವಿಚಕ್ರಪಾಣಿ ಸಮ್ಮುಖದಲ್ಲಿ ನೀಡಲಾಯಿತು.

೯.

ಸ್ಥಳ : ಅದೇ (ಕುಮಾರಸ್ವಾಮಿ) ದೇವಾಲಯದ ಮೆಟ್ಟಿಲಿಗೆ ಹಾಕಿರುವ ಶಾಸನದ ತುಂಡು

ಕಾಲ : ಕ್ರಿ.ಶ. ೧೧ನೆಯ ಶತಮಾನ

ಮನೆತನ : -----

ಅರಸ : ----

ಶಾಸನ ವಿಷಯ : ತುಂಡು ಶಾಸನ, ಶಾಪಾಶಯವನ್ನು ಮಾತ್ರ ಹೊಂದಿದೆ. ಕ್ರಿ.ಶ. ೧೧ನೆಯ ಶತಮಾನದ್ದಾಗಿದೆ.

೧೦.

ಸ್ಥಳ : ಕುಮಾರಸ್ವಾಮಿ ದೇವಾಲಯದ ಮೆಟ್ಟಿಲಿಗೆ ಹಾಕಿರುವ ಶಾಸನದ ತುಂಡು

ಕಾಲ : ಕ್ರಿ.ಶ. ೧೧ನೆಯ ಶತಮಾನ

ಮನೆತನ : -----

ಅರಸ : -----

ಶಾಸನ ವಿಷಯ : ಹನ್ನೊಂದನೆಯ ಶತಮಾನಕ್ಕೆ ಸೇರಿದ ಈ ತುಂಡು ಶಾಸನದಲ್ಲಿ ಸ್ವಾಮಿತಪೋವನಾಧಿಪತಿ ಮತ್ತು ಹೆಗ್ಗಡೆ ನಾಗನ ಉಲ್ಲೇಖವಿದೆ.

೧೧.

ಸ್ಥಳ : ಕುಮಾರಸ್ವಾಮಿ ದೇವಾಲಯದ ಮೆಟ್ಟಿಲಿಗೆ ಹಾಕಿರುವ ಶಾಸನ

ಕಾಲ : ಕ್ರಿ.ಶ. ೧೧ನೆಯ ಶತಮಾನ

ಮನೆತನ : -----

ಅರಸ : -----

ಶಾಸನ ವಿಷಯ : ತುಂಡು ಶಾಸನ ಹಾಳಾಗಿದೆ. ೧೧ನೆಯ ಶತಮಾನದ ಲಿಪಿಯಲ್ಲಿರುವ ಇದರಲ್ಲಿ ಶಾಪವಾಚಕ ಮಾತ್ರವೇ ಉಳಿದಿದೆ.

೧೨.

ಸ್ಥಳ : ಕುಡತಿನಿ ಗ್ರಾಮದ ವೀರಭದ್ರನ ದೇವಸ್ಥಾನದ ಮುಂದೆ ನಿಲ್ಲಿಸಿದ ಕಲ್ಲಿನ ಶಾಸನ

ಕಾಲ : ಕ್ರಿ.ಶ. ೧೧೧೯ ಮೇ ೧೧

ಮನೆತನ : ಚಾಲುಕ್ಯ

ಅರಸ : ತ್ರಿಭುವನಮಲ್ಲ

ಶಾಸನ ವಿಷಯ : ಚಾಲುಕ್ಯ ವಿಕ್ರಮ ವರ್ಷ ೪೪, ವಿಕಾರಿ, ವೈಶಾಖ, ಅಮವಾಸ್ಯೆ, ಆದಿತ್ಯವಾರ, ಸೂರ್ಯಗ್ರಹಣ ಕ್ರಿ.ಶ. ೧೧೧೯, ಮೇ ೧೧, ಆದಿತ್ಯವಾರ. ವಾಜಿ ವಂಶ ಮತ್ತು ಶ್ರೀವತ್ಸ ಗೋತ್ರದ ಬ್ರಾಹ್ಮಣ ಕೇಶವರಾಜನ ಮಗ ಮಾಳಪ ನಾಯಕನ ಮಗ ಮಾರ್ತಂಡಯ್ಯ ನಾಯಕನು ಶಿವ ದೇವಸ್ಥಾನವನ್ನು ಕಟ್ಟಿಸಿ, ಮಾರ್ತಾಂಡೇಶ್ವರ ದೇವರನ್ನು ಪ್ರತಿಷ್ಠಾಪಿಸಿ, ದೇವರ

ಸೇವೆಗೆ ದಂಡಸಾನಿ ಯಶೋಧರ ಬ್ರಹ್ಮಚಾರಿ ಮತ್ತು ಕೊಟ್ಟಿತೊಣೆಯ ಐದು ವರ್ಗಗಳ ಸಾನಿಧ್ಯದಲ್ಲಿ ಭೂಮಿ ದಾನ ಕೊಟ್ಟಿದ್ದನ್ನು ತಿಳಿಸುತ್ತದೆ[೯]. ಆತನು ದೇವಸ್ಥಾನದಲ್ಲಿ ತಪೋಧರನಿಗೆ, ಊಟದ ವ್ಯವಸ್ಥೆ ಮಾಡಿದ್ದನ್ನು ತಿಳಿಸುತ್ತದೆ. ಬದ್ದಮಯ್ಯನ ಮಗ ಮಾಚೆಗಾವುಂಡನು ಅದೇ ದೇವರಿಗೆ ಭೂಮಿ ದಾನ ಮಾಡಿದನು. ಮಾರ್ತಂಡಯ್ಯ ನಾಯಕನು ಸರಸ್ವತಿ ಮತ್ತು ವಿನಾಯಕ ದೇವಸ್ಥಾನಗಳನ್ನು, ಒಂದು ಸುಂದರವಾದ ಸಭಾ ಮಂಟಪ ಮತ್ತು ಇಂದ್ರ-ದೀಪ ಸ್ಥಂಭವನ್ನೂ ಸಹ ಕಟ್ಟಿಸಿದನು.

೧೩.

ಸ್ಥಳ : ಗ್ರಾಮದ (ಕುಡತಿನಿ) ದರ್ಗಾದಲ್ಲಿ ನೆಲಕ್ಕೆ ಹಾಸಿದ ಕಲ್ಲಿನ ಶಾಸನ

ಕಾಲ : ಕ್ರಿ.ಶ. ೧೧೨೦ ಅಕ್ಟೋಬರ್ ೮ ಶುಕ್ರವಾರ

ಮನೆತನ : ಚಾಲುಕ್ಯ

ಅರಸ : ದುರ್ಗರಾಜ

ಶಾಸನ ವಿಷಯ : ತ್ರುಟಿತ ಶಾಸನ, ಶಾಸನದಲ್ಲಿ ಚಾಲುಕ್ಯ ವಿಕ್ರಮ ವರ್ಷದ ೪ (೫) ಶಾರ್ವರಿ, ಆಶ್ವೀಜ, ಹುಣ್ಣಿಮೆ ಶುಕ್ರವಾರವು ಕ್ರಿ.ಶ. ೮-೧೦-೧೧೨೦ನೆಯ ದಿನಕ್ಕೆ ಸರಿಹೊಂದುತ್ತದೆ. ಅಂದು ಚಂದ್ರಗ್ರಹಣವು ಇದ್ದು ದುರ್ಗಾರಾಜ ದಂಡನಾಯಕ ಮತ್ತು ಆತನ ಮಗಳು ಚಾವಣಾ ದೇವಿಯರು ದುರ್ಗೇಶ್ವರ ದೇವಸ್ಥಾನಕ್ಕೆ ಭೂಮಿ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ[೧೦].

೧೪.

ಸ್ಥಳ : ಕುಡತಿನಿ ಗ್ರಾಮದ ರಾಮಲಿಂಗೇಶ್ವರ ದೇವಾಲಯದ ಬಳಿ ಬಿದ್ದಿರುವ ಶಾಸನ

ಕಾಲ : ಕ್ರಿ.ಶ. ೧೧೩೬

ಮನೆತನ : ಚಾಲುಕ್ಯ

ಅರಸ : ಜಗದೇಕಮಲ್ಲ ಅರಸ

ಶಾಸನ ವಿಷಯ : ಶಾಸನದ ವಿಷಯ ತ್ರುಟಿತವಾಗಿದ್ದು. ಉತ್ತರಾಯಣ ಸಂಕ್ರಾಂತಿಗೆ ಸರಿ ಹೊಂದುವ ೧೦೩೬ರ ಶುಕ್ರವಾರದಂದು ಚಾಲುಕ್ಯ ದೊರೆ ಜಗದೇಕಮಲ್ಲ ದೇವರ (ಇಮ್ಮಡಿ ಜಯಸಿಂಹ) ಆಳ್ವಿಕೆಯ ಕಾಲದಲ್ಲಿ ನೊಳಂಭದೇವಿಯ ಅಂಗವನ್ನು (ಭಸ್ಮ) ಗಂಗೆಯಲ್ಲಿ ಹಾಕಿ ಬಂದ ಮಾಧವಪಡಂಗಿ, ಕ್ರಿಷ್ಣಯ್ಯನಿಗೆ ಭೂದಾನ ಕೊಡಲಾದ ವಿಷಯವನ್ನು ತಿಳಿಸುತ್ತದೆ. ಜಗದೇಕಮಲ್ಲ ದೇವನ ಮಹಿಷಿ ನೊಳಂಬ ಪುತ್ರಿ ದೇವಳಾದೇವಿ ಹಾಗೂ ನೊಳಂಬ ಉದಯಾದಿತ್ಯನ ಉಲ್ಲೇಖವಿದೆ.

೧೫.

ಸ್ಥಳ : ಕುಡತಿನಿಯ ಬೆನಕಪ್ಪ ದೇವಾಲಯದ ಪ್ರವೇಶ ದ್ವಾರದಬಳಿ ಬಿದ್ದಿರುವ ಶಾಸನ

ಕಾಲ : ಕ್ರಿ.ಶ. ೧೧೪೯ ಡಿಸೆಂಬರ್ ೨೨ ಬುಧವಾರ

ಮನೆತನ : ಚಾಲುಕ್ಯ

ಅರಸ : ಜಗದೇಕಮಲ್ಲದೇವ

ಶಾಸನ ವಿಷಯ : ಈ ಶಾಸನವು ಸ್ವಲ್ಪ ತ್ರುಟಿತವಾಗಿದ್ದ ಶಕ ೧೦೭೧ನೆಯ ವಿಭವ, ಫಾಲ್ಗುಣ, ಶುದ್ಧ ೧೦, ಸೋಮವಾರ ಉತ್ತರಾಯಣ ಸಂಕ್ರಾಂತಿಯು ಕ್ರಿ.ಶ. ೨೨-೧೨-೧೧೪೯ ಬುಧವಾರವಾಗುತ್ತದೆ. ಉತ್ತರಾಯಣವು ಡಿಸೆಂಬರ್ ೨೫ರ ಶನಿವಾರದಂದು ಬಂದಿದೆ. ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲದೇವನ ಆಳ್ವಿಕೆಯ ಕಾಲದ್ದಾಗಿದ್ದು ಅವನ ಮಹಾಮಂಡಲೇಶ್ವರ ಕಾಚರಸ, ಗಮಗರಸ, ದೊರವದಿನಾಡ ಲೋಕರಸ, ಹಾಗೂ ಮಹಾಪ್ರಧಾನ ಲಖ್ಖೆಯ ನಾಯಕ, ಅವನ ತಮ್ಮಂದಿರಾದ ಮಾದೇಯ ನಾಯಕ, ವಿರೂಪ ನಾಯಕ ಮತ್ತು ಆಚೇಯ ನಾಯಕ ಹಾಗೂ ದೊರವದಿ ಎಪ್ಪತ್ತರ ಪ್ರಭು ಗಾವುಂಡರು, ಎಂಟುಹಿಟ್ಟು ಎಲ್ಲರು ಸೇರಿ ಕುತನೂರಿನಲ್ಲಿ ವಿರುಪಾಕ್ಷದೇವರನ್ನು ಮತ್ತು ಕುರುಗೋಡಿನ ಭೋಗೇಶ್ವರ ದೇವರ ದೇವಾಲಯಗಳನ್ನು ಕಟ್ಟಿಸಿ ಭೂದಾನ ನೀಡಿದರು[೧೧]. ಓರುವಾಯಿ ಕಲಿದೇವರ ಸ್ಥಾನಪತಿ ಭೀವರಾಸಿಪಂಡಿತರ ಕಾಲನ್ನು ತೊಳೆದು ಈ ದಾನವನ್ನು ಕೊಡಲಾಯಿತು. ಭೀವರಾಸಿಪಂಡಿತನು ಹೊಸ ಕುತ್ತಕನೂರಿನಲ್ಲಿ ಬ್ರಹ್ಮೇಶ್ವರ ದೇವರನ್ನು ಮತ್ತು ನೀಲಕಂಠ ದೇವರನ್ನು ಪ್ರತಿಷ್ಠಾಪಿಸಿ ಭೂದಾನ ನೀಡಿದ್ದಾನೆ ಎಂಬ ವಿಷಯವನ್ನು ಈ ಶಾಸನವು ತಿಳಿಯಪಡಿಸುತ್ತದೆ.



೧೬.

ಸ್ಥಳ : ಅದೇ (ಕುಮಾರಸ್ವಾಮಿ ದೇವಾಲಯ) ಸ್ಥಳದಲ್ಲಿ ಮತ್ತೊಂದು ಶಾಸನ

ಕಾಲ : ಕ್ರಿ.ಶ. ೧೧೬೮ ಜನವರಿ ೧೮



ಮನೆತನ : ------

ಅರಸ : ------

ಶಾಸನ ವಿಷಯ : ಶಕವರ್ಷ ೧೦೯೦ನೆಯ ಸರ್ವಜಿತ ಸಂವತ್ಸರದ ಮಾಘ, ಶು. ೫ ಗುರುವಾರದ ಉಲ್ಲೇಖವಿರುವ ಈ ಶಾಸನವು ಕ್ರಿ.ಶ. ೧೮-೧-೧೧೬೮ ಸರಿ ಹೊಂದುತ್ತದೆ. ಕೊಂಕಣಗೇರಿಯ ಗಾವುಂಡನ ಮಗನು (ಹೆಸರು ಹಾಳಾಗಿದೆ) ಋಣಮೋಚನ ದೇವರ ಪ್ರತಿಷ್ಠೆಯ ಸಂದರ್ಭದಲ್ಲಿ (ಕಳಸ) ರೋಹಣದಂದು ಖಂಡಸ್ಫಟೊತ ಜೀರ್ಣೋದ್ಧಾರಕ್ಕೆಂದು ಭೂಮಿಯನ್ನು ದಾನವಾಗಿ ಬಿಟ್ಟರು. ಅಬಮಯ್ಯನ ಸಾವಿದೇವನು ಈ ದೇವರಿಗೆ ದಾನ

ನೀಡುತ್ತಾನೆ[೧೨]. ಆಗ ಆ ಭಾಗವನ್ನು ದಂಡಾಸನಿ ಪುರುಷೋತ್ತಮ ಬ್ರಹ್ಮಚಾರಿಯವರು ಆಳುತ್ತಿರುತ್ತಾರೆ.

೧೭.

ಸ್ಥಳ : ಕುಡತಿನಿಯ ಬೆನಕಪ್ಪ ದೇವಾಲಯದ ಪ್ರವೇಶ ದ್ವಾರದದಲ್ಲಿ ಬಿದ್ದಿರುವ ಶಾಸನ

ಕಾಲ : ಕ್ರಿ.ಶ. ೧೧೯೫ ಫೆಬ್ರವರಿ ೨೬ ಭಾನುವಾರ

ಮನೆತನ : ಸಿಂಧ ವಂಶ

ಅರಸ : ಇಮ್ಮಡಿ ರಾಚಮಲ್ಲದೇವ

ಶಾಸನ ವಿಷಯ : (ವಿಕ್ರಮ) ಕಾಲದ ಆನಂದ ಸಂವತ್ಸರದ ಫಾಲ್ಗುಣ ಮಾಸದ ಶು. ೧೫, ಆದಿವಾರ, ಕ್ರಿ.ಶ. ೨೬-೦೨-೧೧೯೫ ಭಾನುವಾರಕ್ಕೆ ಸರಿಹೊಂದುತ್ತದೆ. ಏಚಿಸೆಟ್ಟಿ ಎಂಬುವನು ವಿನಾಯಕ ದೇವರಿಗೆ ದೇವಾಲಯವನ್ನು ಕಟ್ಟಿಸಿದಾಗ ಸಿಂಧ ವಂಶದ ರಾಚಮಲ್ಲನ ಮೊಮ್ಮಗನು, ಇರುಂಗೋಳದೇವನ ಮಗನೂ ಆದ ಇಮ್ಮಡಿ ರಾಚಮಲ್ಲದೇವನು ಈ ದೇವಾಲಯಕ್ಕೆ ಭೂಮಿಯನ್ನು ದಾನವಾಗಿ ನೀಡಿದ.

೧೮.

ಸ್ಥಳ : ಬೇವಿನ ಮರದ ಕೆಳಗೆ ನಿಲ್ಲಿಸಿದ ಕಲ್ಲಿನ ಶಾಸನ

ಕಾಲ : ಕ್ರಿ.ಶ. ೧೨೦೭ ಜುಲೈ ೨೬ ಗುರುವಾರ

ಮನೆತನ : ಹೊಯ್ಸಳ

ಅರಸ : ವೀರಬಲ್ಲಾಳ

ಶಾಸನ ವಿಷಯ : ತ್ರುಟಿತವಾಗಿದ್ದು, ಕಾರ್ತಿಕೇಯ ತಪೋವನದ ಅಧಿಪತಿಯಾದ ವಿಷ್ಣುಕರ-ಬ್ರಹ್ಮಚಾರಿಯ ಅಧ್ಯಕ್ಷತೆಯಲ್ಲಿ ಐದು ವರ್ಗಗಳು, ಏಳ್ಕೋಟಿ ಮಹಾ ದೇವರು, ಅಸಂಖ್ಯಾತ ಗಣಗಳು ಮತ್ತು ಮುಮ್ಮುರಿದಂಡರು ಸಭೆ ಸೇರಿ ನಡತೆ ತಪ್ಪುವುದನ್ನು ಮತ್ತು ಅಪರಾಧಗಳನ್ನು ನಿರ್ಧರಿಸುವ ಹಕ್ಕನ್ನು ಸ್ಥಳೀಯ ತಪೋಧನರಿಗೆ ನಿರ್ಧರಿಸಲಾಯಿತೆಂದು ತಿಳಿಸುತ್ತದೆ[೧೩].

೧೯.

ಸ್ಥಳ : ಅಲ್ಲೇ (ಕುಮಾರಸ್ವಾಮಿ ದೇವಾಲಯ) ಇರುವ ಇನ್ನೊಂದು ಶಾಸನ

ಕಾಲ : ಕ್ರಿ.ಶ. ೧೨೧೦ ಮೇ ೨೭

ಮನೆತನ : ಚಾಲುಕ್ಯ

ಅರಸ : ವಿಷ್ಣುಕರ ದೇವ (ತಪೋವನಾಧಿಪತಿ)

ಶಾಸನ ವಿಷಯ : ಶಕವರ್ಷ ೧೧೩೨, ಪ್ರಮೋದ, ಜೇಷ್ಠ ಶು.೧೩ ಗುರುವಾರಕ್ಕೆ ಸರಿಹೊಂದುವ ಕ್ರಿ.ಶ. ೨೭-೫-೧೨೧೦ ರ ಈ ಶಾಸನದ ತಿಂಗಳು ನಿಜ ಜ್ಯೇಷ್ಠವಾಗಿದೆ. ದೇವರ ತಪೋವನಾಧಿಪತಿ ವಿಷ್ಣು ಕರದೇವನು ಸ್ಥಾನದ ಏಳ್ಕೋಟಿ ಭಕ್ತರು ಹಾಗೂ ಬಣಜಿಗರು ಮಹಾಸಭೆಗೆ ಸೇರಿದಾಗ ನಾಗೇಶ್ವರದೇವರಿಗೆ ಮನೆ, ನಂದಾದೀವಿಗೆಗೆ ಗಾಣವೊಂದನ್ನು ಹಾಗೂ ಭೂಮಿಯನ್ನು ದಾನವಾಗಿ ಕೊಡಲಾಗಿದೆ[೪೪].

೨೦.

ಸ್ಥಳ : ಬೋಳು ಬಸವಣ್ಣ ದೇವಸ್ಥಾನದ ಮುಂದೆ ನಿಲ್ಲಿಸಿರುವ ಕಲ್ಲಿನ ಶಾಸನ

ಕಾಲ : ಕ್ರಿ.ಶ. ೧೨೧೯

ಮನೆತನ : ಹೊಯ್ಸಳ

ಅರಸ : ಎರಡನೆಯ ವೀರಬಲ್ಲಾಳ

ಶಾಸನ ವಿಷಯ : ಕಾರ್ತಿಕೇಯ ತಪೋವನದ ಮುಖ್ಯಸ್ಥ ಉದಯಾಕರದೇವ ಬ್ರಹ್ಮಚಾರಿಯರಸ, ಕೊಟ್ಟತ್ತೊಣೆ ಸ್ಥಾನದ ಐದು ವರ್ಗಗಳು, ಐದು ಮಠಗಳ ತಪೋಧನರು ಮತ್ತು ಅಸಂಖ್ಯಾತ ಗಣಗಳು ಸಭೆ ಸೇರಿದಾಗ ಗಾಣಿಗರ ಅರವತ್ತು ಕುಟುಂಬಗಳು ತೆಲ್ಲಿಗೇಶ್ವರ ದೇವರನ್ನು ಪ್ರತಿಷ್ಠಾಪಿಸಿ, ಸಂಸ್ಥೆಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಶೈವ ಗುರು ಕಲ್ಯಾಣ ಶಕ್ತಿಯ ಪಾದ ತೊಳೆದು, ದೇವರ ಸೇವೆಗೆಂದು ಪ್ರತಿಯೊಂದು ಮಾರಾಟ ಮತ್ತು ಕೊಳ್ಳುವಿಕೆ ಮೇಲಿನ ತೆರಿಗೆಯನ್ನು ವಿಧಿಸಿದ ವಿಷಯ ತಿಳಿಸುತ್ತದೆ[೪೫].

೨೧.

ಸ್ಥಳ : ಕುಡತಿನಿಯ ವೀರಭದ್ರನ ಗುಡಿಯ ಬಳಿಯ ನಂದಿಯ ಪೀಠದಲ್ಲಿನ ಶಾಸನ

ಕಾಲ : ಕ್ರಿ.ಶ. ೧೫೩೨ ಆಗಸ್ಟ್ ೩೦

ಮನೆತನ : ವಿಜಯನಗರ

ಅರಸ : ಅಚ್ಯುತದೇವರಾಯ

ಶಾಸನ ವಿಷಯ : ಶಾ. ಶಕವರ್ಷ ೧೪೫೪ನೆಯ ನಂದನ, ಅಧಿಕ ಭಾದ್ರಪದ ಬಹುಶ: ೩೦ ಶುಕ್ರವಾರ ಉಲ್ಲೇಖವಿರುವ ಈ ಶಾಸನವು ಕ್ರಿ.ಶ.೩೦-೮-೧೫೩೨ರ ಶುಕ್ರವಾರಕ್ಕೆ ಸರಿಹೊಂದುತ್ತದೆ. ಅಚ್ಯುತದೇರಾಯರ ದಕ್ಷಿಣ ಭುಜಾದಂಡ ಭಂಡಾರದ ತಿಮ್ಮಪ್ಪಯ್ಯನವರಿಗೆ ಪುಣ್ಯವಾಗಬೇಕೆಂದು ಅಳಿಯ ಕೊಂಡಪ್ಪನು ಕುಡತಣಿಯ ವೀರಭದ್ರದೇವರ ನೈವೇದ್ಯ, ಜೀರ್ಣೋದ್ಧಾರಕ್ಕೆಂದು ಇಕ್ಕುಳ ಕರಿಯ ಹೊಲಕ್ಕೆ ಕೆಲವು ತೆರಿಗೆಗಳನ್ನು ಬಿಡಲಾಗಿದೆ[೪೬].

೨೨.

ಸ್ಥಳ : ಕುಡತಿನಿ ಗ್ರಾಮದ ಲಕ್ಷ್ಮೀನರಸಿಂಹ ದೇವಾಲಯದಲ್ಲಿ ಬಿದ್ದಿರುವ ಕಂಬ ಶಾಸನ

ಕಾಲ : -----

ಮನೆತನ : -----

ಅರಸ : ಪಲ್ಲವತಾತತನ ಮಗ ಜಕ್ಕಿತನ

ಶಾಸನ ವಿಷಯ : ಈ ಶಾಸನದಲ್ಲಿ ಆತ್ರೇಯ ಗೋತ್ರದ ತೈತ್ತಿರೀಯ ಶಾಖೆಯ ಪಲ್ಲವತಾತನ ಮಗ ಜಕ್ಕಿತನ ಉಲ್ಲೇಖವಿದೆ. ಇವನು ವೆಂಗಿ ಮಂಡಲದ ಕಕ್ಕಲ ದೇವನ ಆಳ್ವಿಕೆಯ ಪ್ರದೇಶ ಗುದ್ರವಾಟದೇಶದ ಪಾಕಾಲ ಅಗ್ರಹಾರದವನು ಎಂಬ ವಿಷಯವಿದ್ದು ಶಾಸನದ ಉಳಿದ ಭಾಗವು ಹಾಳಾಗಿದೆ.

**ಸ್ಮಾರಕ ಶಾಸನಗಳು**

ವೀರನೊಬ್ಬನ ಸ್ಮಾರಕವಾಗಿ ನಿಲ್ಲಿಸಿದ ಶಿಲೆಯೇ ವೀರಶಾಸನ. ವೀರರಲ್ಲಿ ವೀರರನ್ನು ಯುದ್ಧದಲ್ಲಿಯೋ, ತನ್ನ ಗ್ರಾಮವನ್ನು ಕಾಪಾಡುವ ಸಲುವಾಗಿಯೋ, ಇಲ್ಲವಾದರೆ ಇನ್ಯಾವುದಾದರೂ ಧಾರ್ಮಿಕ ಕಾರ್ಯವನ್ನು ಮಾಡುವಲ್ಲಿ ತನ್ನ ಪ್ರಾಣವನ್ನು ಅರ್ಪಿಸಿದರೆ ಆ ಗ್ರಾಮದ, ಇಲ್ಲವೇ ಆ ರಾಜ್ಯದ ಅರಸರು ಅವನ ಸ್ಮಾರಕವಾಗಿ ಕಲ್ಲುಗಳನ್ನು ನೆಡುತ್ತಿದ್ದರು.

ಶಿಲ್ಪದ ದೃಷ್ಟಿಯಿಂದ ವೀರಗಲ್ಲುಗಳಿಗೆ ಮಹತ್ವವಿದೆ. ಸಮಾನವಾಗಿ ವೀರಗಲ್ಲುಗಳಲ್ಲಿ ಮೂರು ಹಂತಗಳಿರುತ್ತವೆ. ಮೊದಲನೆಯ ಹಂತದಲ್ಲಿ ವೀರನು ತನ್ನ ಶತ್ರುಗಳೊಡನೆ ಯುದ್ಧದಲ್ಲಿ ಹೋರಾಡುತ್ತಿರುವುದು, ಎರಡನೆಯ ಹಂತದಲ್ಲಿ ಹೋರಾಡಿ ಮಡಿದ ವೀರನನ್ನು ದೇವ ಕನ್ನಿಕೆಯರು ದೇವ ಲೋಕಕ್ಕೆ ಕರೆದೊಯ್ಯುತ್ತಿರುವುದು, ಮೂರನೆಯ ಹಂತದಲ್ಲಿ ಮಡಿದ ವೀರನನ್ನು ಶಿವಲಿಂಗದ ಸಮ್ಮುಖದಲ್ಲಿರುವುದನ್ನು ಕೆತ್ತಲಾಗಿರುತ್ತದೆ.

ಇನ್ನು ಕೆಲವು ವೀರಗಲ್ಲುಗಳಲ್ಲಿ ಯುದ್ಧಕ್ಕೆ ಹೋರಾಟ ಅಥವಾ ಯುದ್ಧದಲ್ಲಿ ಯೋಧನೊಬ್ಬರು ಕೈಯಲ್ಲಿ ಬಿಲ್ಲು ಬಾಣ ಅಥವಾ ಖಡ್ಗ, ಭರ್ಜಿ, ಡಾಲಿ ಹಿಡಿದ ಬೆತಾವರ ಇರಬಹುದು. ಇಲ್ಲವೆ ಇಬ್ಬರೇ ಹೋರಾಡುತ್ತಿರುವ ಸನ್ನಿವೇಶ ಇರಬಹುದು.

ಕೆಲವು ಕಡೆ ಒಂದೇ ಹಂತದಲ್ಲಿ ವೀರನ ಪಕ್ಕದಲ್ಲಿ ದೇವತಾ ಸ್ತ್ರೀಯರು ಕೊಂಡೊಯ್ಯುತ್ತಿರುವ ಚಕ್ರವೂ ಇರುತ್ತದೆ. ಕೆಲವು ಕಡೆ ವೀರಗಲ್ಲಿನ ಮೇಲೆ ಬರಹಗಳಿರುತ್ತವೆ. ಕೆಲವು ಕಲ್ಲುಗಳ ಮೇಲೆ ಬರಹಗಳಿರುವುದಿಲ್ಲ. ಸಾಮಾನ್ಯವಾಗಿ ಎರಡು ಅಂತಸ್ತುಗಳ ಮಧ್ಯ

ಭಾಗದಲ್ಲಿರುವ ಸ್ಥಳದಲ್ಲಿ ಇರುತ್ತದೆ. ರಾಜನ ಹೆಸರು ಮುಂತಾದ ವಿವರಗಳನ್ನು ಹೇಳಿದ ನಂತರ ವೀರನು ಯುದ್ಧದಲ್ಲಿ ಕಾಪಾಡಿದ ವರ್ಣನೆಯು ಬರುತ್ತದೆ ಹಾಗೂ ಇವುಗಳಲ್ಲಿ ಕಾಲನಿರ್ದೇಶಿತವೆನಿರುತ್ತದೆ.

ಇನ್ನು ಕೆಲವು ಕಡೆ ವೀರನ ಚಿತ್ರವನ್ನೇ ಕೊರೆಯದೇ ಅವನ ಕಾರ್ಯವನ್ನು ಚಿತ್ರ ಕೆತ್ತಿರುತ್ತದೆ. ಇವೂ ವೀರಗಲ್ಲುಗಳೆ. ಆದರೆ ಇವು ವೀರಗಲ್ಲುಗಳೆಂಬುದನ್ನು ತಿಳಿಯಬೇಕಾದರೆ ಬರೇ ನೋಡಿದರೆ ಸಾಲದು, ಓದಬೇಕು. ಈ ವೀರರ ಬಗ್ಗೆ ಶಾಸನಗಳನ್ನು ಬರೆಯಿಸಲು ಎರಡು ಉದ್ದೇಶಗಳಿದ್ದವು. ಮೊದಲನೆಯದಾಗಿ ಮಡಿದ ವೀರನ ಹೆಸರು ಶಾಶ್ವತವಾಗಿರಲೆಂದು, ಎರಡನೆಯದಾಗಿ ಹೋರಾಡಿ ಮಡಿದ ವೀರರ ಮನೆಯವರಿಗೆ, ವೀರನ ಸ್ಮಾರಕವಾಗಿ ದಾನಗಳನ್ನು ಮಾಡಿ ಅದನ್ನು ಅವನ ಕುಟುಂಬಕ್ಕೆ ಕೊಡುತ್ತಿದ್ದರು.

**ಸ್ಮಾರಕ ಶಾಸನಶಿಲ್ಪ**

ಪ್ರಾಚೀನ ಕಾಲದಲ್ಲಿ ಎಲ್ಲರೂ ಅಕ್ಷರ ಕಲಿಗಳಾಗಿರಲಿಲ್ಲ. ಹಾಗಾಗಿ ಶಾಸನ ಶಿಲೆಗಳಲ್ಲಿ ಶಾಸನಶಿಲ್ಪ ಒಂದು ರೂಪ ಪಡೆಯಲು ಪ್ರಮುಖ ಕಾರಣವಾಗಿರಬಹುದು. ಸಾಮಾನ್ಯ ಜನತೆ ಕನ್ನಡ ಶಾಸನಶಿಲ್ಪದ ಪ್ರಮುಖ ಉದ್ದೇಶವನ್ನು ತಿಳಿಯಲಿ ಎಂಬ ಕಾರಣದಿಂದ ಶಾಸನ ಹಾಕಿಸಿರುವರು ಅಥವಾ ಶಿಲ್ಪಿಗಳು ವಿಷಯದ ಜೊತೆಯಲ್ಲಿ ಶಿಲ್ಪವನ್ನು ನಿರ್ಮಿಸುವ ಅಭ್ಯಾಸ ಬೆಳೆಸಿದರು. ಅನಕ್ಷರಸ್ಥರಿಗೂ ಇದು ತಿಳಿಯಲಿ ಎಂಬುದು ಇಲ್ಲಿ ನಮಗೆ ಅರ್ಥವಾಗುತ್ತದೆ. ಇವುಗಳಲ್ಲಿ ಶಿಲ್ಪಗಳು ನಿರಕ್ಷರಿಗೆ ಶಾಸನಗಳು ಸಾಕ್ಷರರಿಗೆ ಆಯಾ ಜನಾಂಗಗಳ ಮೌಲ್ಯವನ್ನು ಬೋಧಿಸುವ ಪ್ರಸಾರ ಫಲಕಗಳಾಗಿ ನಿಂತಿವೆ. ವೀರ ಪುರುಷ, ಮಹಿಳೆಯರ, ರಾಜರ, ಅಧಿಕಾರಿಗಳ, ಯಾವುದಾದರೊಂದು ಪರಾಕ್ರಮದ ಸ್ಮರಣಾರ್ಥವಾಗಿ ನಿರ್ಮಿಸಿದ ಸಾಧನಗಳನ್ನು ಸ್ಮಾರಕಗಳೆನ್ನುತ್ತಾರೆ.

**ಮಹಾಸತಿ ಶಿಲ್ಪಗಳು**

ಗಂಡ ಸತ್ತ ನಂತರ ಆತನ ಚಿತೆಯಲ್ಲಿ ಹಾರಿ ಪ್ರಾಣತ್ಯಾಗ ಮಾಡುವ ಸ್ತ್ರೀಯನ್ನು ಮಹಾಸತಿ ಅಥವಾ ಮಾಸ್ತಿಯೆಂದು ಕರೆಯುತ್ತಾರೆ. ಹೀಗೆ ಪ್ರಾಣತ್ಯಾಗ ಮಾಡಿದವರ ಸ್ಮರಣಾರ್ಥವಾಗಿ ನಿಲ್ಲಿಸಿರುವ ಕಲ್ಲುಗಳೇ ಮಹಾಸತಿ ಅಥವಾ ಮಾಸ್ತಿ ಕಲ್ಲುಗಳಾಗಿವೆ. ಈ ಪ್ರದೇಶದಲ್ಲಿ ಸತ್ತ ಗಂಡನೊಂದಿಗೆ ಸಹಗಮನ ಮಾಡಿ ಮಹಾಸತಿಯಾಗುತ್ತಿದ್ದರು. ಅವರ ಸ್ಮರಣೆಯಾಗಿ ಶಿಲೆಗಳನ್ನು ನಿಲ್ಲಿಸಲಾಗುತ್ತಿತ್ತು. ಮುಖ್ಯವಾಗಿ ಇದರಲ್ಲಿ ನಿಂತ ಇಲ್ಲವೇ ಕುಳಿತ

ಸ್ತ್ರೀಯು ಮೇಲೆಕ್ಕೆತ್ತಿದ್ದ ಕೈಯಲ್ಲಿ ಲಿಂಬೆಹಣ್ಣು ಅಥವಾ ಕನ್ನಡಿಯನ್ನು ಹಿಡಿದಿರುತ್ತಾಳೆ. ಈ ಪ್ರದೇಶದಲ್ಲಿ ಹೆಚ್ಚು ಮಹಾಸತಿಗಲ್ಲುಗಳನ್ನು ಕಾಣಬಹುದು. ಮುಖ್ಯವಾಗಿ ಈ ಗ್ರಾಮದ ದೊಡ್ಡ ಹನುಮಂತನ ದೇವಸ್ಥಾನ ಮುಂದೆ ಇರುವ ಮಹಾಸತಿನಲ್ಲಿ ವೀರಮಹಾಸತಿಯು ಇಬ್ಬರ ಅಪ್ಸರೆಯರೊಂದಿಗೆ ಸ್ವರ್ಗಕ್ಕೆ ಹೋಗುತ್ತಿರುವುದು ಮೇಲಿನ ಭಾಗದಲ್ಲಿ ಸ್ವರ್ಗದಲ್ಲಿ ಶಿವನ ಪೂಜೆ ಮಾಡುತ್ತಿರುವ ದೃಶ್ಯ ಕಾಣಬಹುದು.

**೪.೨ ಸಾಮಾಜಿಕ ಜೀವನ**

ಇತಿಹಾಸವನ್ನು ಗಮನಿಸಿದಾಗ ಒಂದು ರಾಜ್ಯ ಅಥವಾ ಪ್ರದೇಶವು ಪ್ರಗತಿಯನ್ನು ಸಾಧಿಸಿದಾಗ ಮಾತ್ರ ಅದು ಇತಿಹಾಸದ ಪುಟಗಳಲ್ಲಿ ಚಿರಸ್ಮರಣೀವಾಗಿರುತ್ತದೆ. ಪ್ರಗತಿಯನ್ನು ಅಳೆಯಲು ಇರುವ ಒಂದೇ ಒಂದು ಮಾಪನ ಕೇವಲ ಅಂದಿನ ಕಾಲದ ಸಾಮಾಜಿಕ ಸ್ಥಿತಿ-ಗತಿಗಳಾಗಿವೆ.

ಐತಿಹಾಸಿಕ ಹಿನ್ನೆಲೆಯಲ್ಲಿ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಯನ್ನು ಸರಿಯಾದ ಕ್ರಮದಲ್ಲಿ ರಚಿಸಬೇಕಾದರೆ ಅದಕ್ಕೆ ಸಾಮಾಜಿಕ ಕಾರ್ಯಚಟುವಟಿಕೆಗಳು ಮುಖ್ಯವಾಗಿವೆ. ಸಾಮಾಜಿಕ ಸಂಘಟನೆ ಮಾನವನ ಸರ್ವತೋಮುಖ ಅಭಿವೃದ್ಧಿಗೆ ಪ್ರಮುಖ ಕಾರಣವಾಗಿದೆ. ಜನತೆಯ ಪರಸ್ಪರ ಸಂಬಂಧಗಳ ಸುವ್ಯವಸ್ಥ ಸಮೂಹಕ್ಕೆ ಸಾಮಾಜಿಕ ಎನ್ನಬಹುದು. ಇದರಲ್ಲಿ ವರ್ಗ, ವರ್ಣ, ಕುಟುಂಬ, ಸಂಘ, ಸಂಸ್ಥೆ ಹಾಗೂ ಅವುಗಳ ಸಂಪ್ರದಾಯ ಆಲೋಚನಾ ಕ್ರಮಗಳು ಇತ್ಯಾದಿ ಮುಖ್ಯವಾದವು.

**ವರ್ಗ ಮತ್ತು ಜಾತಿ ವ್ಯವಸ್ಥೆ**

ಪ್ರಾಚೀನ ಕಾಲದಿಂದ ವರ್ಗವ್ಯವಸ್ಥೆ ಮೊದಲೋ, ಜಾತಿ ವ್ಯವಸ್ಥೆ ಮೊದಲೋ ಎನ್ನುವುದಕ್ಕೆ ಅನೇಕ ಜಿಜ್ಞಾಸೆಗಳಿವೆ. ವರ್ಣ ಎಂಬ ಶಬ್ದ ಜಾತಿ ಸಂಕಲ್ಪವಾಗಿದೆ. ಅದು ಭಾಷೆ, ಮತ, ಧರ್ಮ, ಬಣ್ಣ ಸೂಚಿಸುವ ಪದವಾಗಿದೆ. ಭೌತಿಕ ಸಾಹಿತ್ಯದಲ್ಲಿ ವರ್ಣವ್ಯವಸ್ಥೆ ಬಗ್ಗೆ ವಿವರಿಸಲಾಗಿದೆ. ಋಗ್ವೇದ ಪುರುಷ ಸೂಕ್ತದಲ್ಲಿ ಬ್ರಹ್ಮನ ಬಾಯಿಂದ ಬ್ರಾಹ್ಮಣ, ಭುಜಗಳಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ, ಪಾದಗಳಿಂದ ಶೂದ್ರರು ಜನಿಸಿದರು ಎಂದು ಹಿಂದೆ ಹೇಳಲಾಗಿತ್ತು. ಈ ಕುಲಗಳು ಉಪಪಂಗಡಗಳಾಗಿವೆ. ಮೇಲು ಕೀಳು ಎಂಬ ಭಾವನೆಗೆ ಕಾರಣವಾಯಿತು. ಆಗ ವರ್ಣ ವ್ಯವಸ್ಥೆ ತನ್ನ ಸ್ಥಾನವನ್ನು ಕಳೆದುಕೊಳ್ಳುತ್ತಿದೆ.

**ಸಾಮಾಜಿಕ ವ್ಯವಸ್ಥೆ**

**೧. ಪ್ರಭುವರ್ಗ**

**೨. ಶ್ರಮವರ್ಗ**

**೧. ಪ್ರಭುವರ್ಗ**

ಈ ವರ್ಗವು ಮೇಲ್‌ಸ್ತರಕ್ಕೆ ಸೇರಿದ್ದು, ಸಮಾಜದಲ್ಲಿ ಉನ್ನತ ಸ್ಥಾನಮಾನ ಹೊಂದಿರುವ ವರ್ಗಗಳಾಗಿವೆ. ಈ ವರ್ಗವು ಮುಖ್ಯವಾಗಿ ಈ ವರ್ಗ ಪುರೋಹಿತ, ರಾಜ ವಿವಿಧ ಅಧಿಕಾರಿಗಳನ್ನು ಒಳಗೊಂಡಿತ್ತು. ಸಾಮಾಜಿಕ ಸ್ತರದಲ್ಲಿ ಉನ್ನತ ಸ್ಥಾನದಲ್ಲಿ ಮಹಾಜನರು, ಸ್ಥಾಪನಾಚಾರ್ಯರು, ಗುರುಗಳು, ಜಿನಮುನಿಗಳು ಪ್ರಮುಖರಾಗಿದ್ದರು. ಮಹಾಜನರು ಅಂದಿನ ಕಾಲದಲ್ಲಿ ಅಗ್ರಸ್ಥಾನದಲ್ಲಿ ಇದ್ದು ಈ ವರ್ಗ ಯಜ್ಞಾಪೂಜೆ, ಪುನಸ್ಕಾರ, ಅಧ್ಯಯನ, ಅಧ್ಯಾಪನ ಇವು ಅವರ ಮುಖ್ಯ ಕರ್ತವ್ಯಗಳಾಗಿದ್ದವು. ಈ ರೀತಿ ಸುತ್ತಮುತ್ತಲಿನ ಕುರುವತ್ತಿ ಬಾಗಲೀಯಲ್ಲಿನ ಅಗ್ರಹಾರ ಕಾಣಬಹುದು. ಇಂತಹ ಅಗ್ರಹಾರಕ್ಕೆ ಬ್ರಹ್ಮಪುರಿಗಳು ಕುಡುತಿನಿಯಲ್ಲಿ ಇದ್ದರು[೧೭]. ಅವರು ವೇದಾಧ್ಯಯನ ನಿರತರಾಗಿದ್ದರು ಎನ್ನುವುದಕ್ಕೆ ಕ್ರಿ.ಶ. ೧೨೦೭ ರ ಜೂಲೈ ೨೬ ಕುಡತಿನಿ ಗ್ರಾಮದ ಬೇವಿನ ಮರದ ಕೆಳಗಿರುವ ಶಾಸನವು ಇದಕ್ಕೆ ಪುಷ್ಟಿಯನ್ನು ಕೊಡುತ್ತದೆ.

**೨. ಶ್ರಮಿಕವರ್ಗ**

ಕುಡುತಿನಿ ಸಮಾಜವು ಅನೇಕ ವೃತ್ತಿಗಳಲ್ಲಿ ನಿರತವಾದ ಶ್ರಮಿಕವರ್ಗವನ್ನು ಹೊಂದಿತ್ತು. ಇವರು ಆರ್ಥಿಕ ಕ್ಷೇತ್ರಗಳಿಗೆ ಕೊಟ್ಟ ಕೊಡುಗೆ ಅಪಾರವಾದುದು. ಇವರು ಉತ್ಪಾದನೆ, ವಿತರಣೆ ಮತ್ತು ಮಾರಾಟದಲ್ಲಿ ತೊಡಗಿದ್ದರು. ಈ ಪ್ರದೇಶದಲ್ಲಿ ಶಾಸನ ವೃತ್ತಿ ನಿರತರಾದ ಶ್ರಮಿಕವರ್ಗ ಅವರ ಸಂಘ ಅಥವಾ ಹೊಕ್ಕಲಗಳನ್ನು ಇಲ್ಲಿನ ಅನೇಕ ಶಾಸನಗಳು ಹೆಸರಿಸುತ್ತವೆ. ಪಾಂಚಳರೆಂದು ಕರೆಯುತ್ತಿದ್ದ ಕಮ್ಮಾರ, ಬಳಿಗ, ಅಕ್ಕಸಾಲಿಗ, ಕಂಚುಸುರ ಶಿಲ್ಪ ಎಂಬ ಐದು ವರ್ಗಗಳಿದ್ದವು. ಇವರು ಕಬ್ಬಿಣ, ಕಟ್ಟಿಗೆ, ಚಿನ್ನ, ಕಂಚು ಶಿಲ್ಪದ ಕೆಲಸ ಮಾಡುತ್ತಿದ್ದರು. ಆದರೆ ಹೆಸರಿಗೆ ತಕ್ಕಂತೆ ಆಯಾವರ್ಗ ಜನರಿಗೆ ಅದೇ ಉದ್ಯೋಗ ಮಾಡಬೇಕೆಂದು ಕಟ್ಟಳೆಗಳು ಇರಲಿಲ್ಲವೆಂದೂ, ಇಲ್ಲಿನ ಕುಡುತಿನಿ ಶಾಸನಗಳು ಈ ಐದು ವರ್ಗದವರನ್ನು ಅವರು ಕಾರ್ತಿಕೇಯ ತಪೋವನಾಧಿಪತಿಯಾಗಿ ಅಲ್ಲಿಯ ಗ್ರಾಮಕ್ಕೆ ಮುಖಂಡರಾಗಿದ್ದರೆಂದು ತಿಳಿಸುತ್ತವೆ.

## ಜಾತಿ ವ್ಯವಸ್ಥೆ

ಶ್ರಮಿಕ ವರ್ಗದವರು ತಮ್ಮ ವೃತ್ತಿಯನ್ನು ವಂಶಪರಂಪರೆಯಾಗಿ ಮುಂದುವರೆಸಿಕೊಂಡು ಬಂದಾಗ ಇದು ಅನೇಕ ಜಾತಿ ಉಪಪಂಗಡಗಳಿಗೆ ದಾರಿಮಾಡಿಕೊಟ್ಟಿತ್ತು. ಹಿಂದೆ ಹದಿನೆಂಟು ಜಾತಿಗಳು ಪ್ರಚಲಿತ ಇದ್ದ ಬಗ್ಗೆ ಶಾಸನ ಮತ್ತು ಕಾವ್ಯಗಳಲ್ಲಿ ಉಲ್ಲೇಖಗಳಿವೆ. ಸಾಮಾಜಿಕ ವ್ಯವಸ್ಥೆಯ ಉನ್ನತ ಸ್ಥಾನಗಳಲ್ಲಿ ಇದ್ದ ಬ್ರಾಹ್ಮಣರು ಪುರೋಹಿತರಾಗಿದ್ದರೆ, ಕೆಳ ಹಂತದಲ್ಲಿ ಹೊಲೆಯ ಇಲ್ಲವೆ ಚಾಂಡಾಲರು ಇದ್ದರು. ಇವರು ಬೇರೆ ಬೇರೆ ಜಾತಿಯವರೊಂದಿಗೆ ಸಂಬಂಧ ಬೆಳೆಸುವಂತೆ ಇರಲಿಲ್ಲ. ಗೋಪಯ್ಯನ ಸಮ್ಮುಖದಲ್ಲಿ ಅಂಗಡಿ ಕಾಲಯ್ಯ ಎಂಬುವನು ತನ್ನ ಮಗಳು ಜಾತಿಸಂಸ್ಕಾರ ಮಾಡಿದ ಕಲಿದೇವರಿಗೆ ದಂಡವಾಗಿ ಭೂದಾನ ನೀಡಿದ್ದಾರೆ. ಇಲ್ಲಿ ಇವಳ ಸಂಬಂಧ ಯಾರೊಂದಿಗಿತ್ತೆಂಬುದು ಸ್ಪಷ್ಟವಾಗಿಲ್ಲ ಎಂದು ಕುಡುತಿನಿ ಶಾಸನದಲ್ಲಿ ಚಾಂಡಾಲರನ್ನು ಹೆಸರಿಸಲಾಗಿದೆ. ಆಯಾ ಜಾತಿಗೆ ಸೇರಿದ ಜನವರ್ಗದವರು ಊರಿನ ಬೇರೆ ಬೇರೆ ಭಾಗದಲ್ಲಿ ವಾಸವಾಗಿದ್ದರು. ಇಂದಿಗೂ ಗ್ರಾಮಗಳನ್ನು ಗಮನಿಸಿದಾಗ ಇದು ಸ್ಪಷ್ಟವಾಗಿದೆ.

## ಕುಟುಂಬ ವ್ಯವಸ್ಥೆ

ಸಾಮಾಜಿಕ ಜೀವನದಲ್ಲಿ ಕುಟುಂಬ ವ್ಯವಸ್ಥೆಯು ಪ್ರಮುಖವಾದುದು. ಇದಕ್ಕೆ ಗಂಡು ಹೆಣ್ಣು ಮೂಲವಾಗಿದ್ದು ಅವರು ಒಂದಾಗಿ ಮನುಕುಲದ ಬೆಳವಣಿಗೆಗೆ ಕಾರಣಕರ್ತರಾಗಿದ್ದಾರೆ. ಇದನ್ನು ಹಿಂದೂ ಸಂಸ್ಕಾರಗಳು 'ವಿವಾಹ'ವೆಂದು ಕರೆದರು. ಗೃಹಸೂತ್ರಗಳು, ವಿವಾಹ ಎಲ್ಲಾ ಸಂಸ್ಕಾರಗಳಿಗೂ ಮೂಲವೆಂದು ಹೇಳುತ್ತದೆ. ಇಲ್ಲಿಯ ಆಚಾರ ನಿಯಮಗಳು ಈ ವಿವಾಹಗಳಲ್ಲಿ ಎಂಟು ಬಗೆಯಲ್ಲಿದ್ದವು ಎಂದು ಗೃಹಸೂತ್ರ ಮತ್ತು ಧರ್ಮ ಸೂತ್ರಗಳಲ್ಲಿ ನಿರೂಪಿಸಲಾಗಿದೆ. ಈ ಗ್ರಾಮವು ವೈದಿಕ ಕಾಲದಲ್ಲಿನ ಆಚರಣೆಯಂತೆ ಹುಡುಗಿ ತಾರುಣ್ಯಾವಸ್ಥೆಗೆ ಬಂದ ಮೇಲೆ ವಿವಾಹಮಾಡುತ್ತಿದ್ದರು. ಸಾಮಾನ್ಯವಾಗಿ ಆಯಾಜಾತಿಗಳ ಒಳಗೆ ಕೊಡು ಕೊಳ್ಳುವಿಕೆ ನಡೆಯುತ್ತಿದ್ದವು. ಮದುವೆ ಮಾಡಿದ ಪ್ರತಿಫಲವಾಗಿ ಸ್ಥಳಿಯ ದೇವರಿಗೆ ತೆರಿಗೆ ಕೊಟ್ಟಿದ್ದ ಬಗ್ಗೆ ಶಾಸನಗಳು ತಿಳಿಸುತ್ತವೆ. ಈ ಗ್ರಾಮದಲ್ಲಿ ಅನುಲೋಮ ವಿವಾಹಪದ್ದತಿ ಹೆಚ್ಚಾಗಿ ಇಂದಿಗೂ ನಡೆಯುತ್ತವೆ.

## ದಾಂಪತ್ಯ ಜೀವನ

ದಾಂಪತ್ಯ ಎಂಬುವುದು ಕೌಟುಂಬಿಕ ವ್ಯವಸ್ಥೆಯಲ್ಲಿ ಪ್ರಮುಖವಾದುದು. ಮಕ್ಕಳನ್ನು ಪಡೆಯುವುದು ಜೀವನ ಸಾರ್ಥಕತೆಯಾಗಿತ್ತು. ಗೃಹಿಣಿಗಂತೂ ಪತಿವ್ರತೆ ಎನಿಸಿಕೊಳ್ಳುವಲ್ಲಿ ವಿಶೇಷ

ಹೆಮ್ಮೆ. ಸ್ತ್ರೀಯರು ಮಕ್ಕಳನ್ನು ಪಡೆಯಲು ಹರಕೆ ಹೊರುವುದು, ವ್ರತಗಳಾಚರಣೆಗಳನ್ನು ಮಾಡುತ್ತಿದ್ದರು. ಈ ರೀತಿ ಕುಡುತಿನಿ ಸಮಾಜದಲ್ಲಿ ಕಂಡುಬರುವುದು ಅಲ್ಲದೇ ಕೇಂದ್ರ ಕುಟುಂಬ ಹಾಗೂ ಅವಿಭಕ್ತ ಕುಟುಂಬಗಳು ಕಂಡುಬರುತ್ತವೆ. ಅಲ್ಲದೇ ಕುಡತಿನಿ ಪರಿಸರದಲ್ಲಿ ದೇವದಾಸಿ ಪದ್ಧತಿ ಈ ಹಿಂದೆ ಅಸ್ತಿತ್ವದಲ್ಲಿತ್ತು. ಆದರೆ ಇಂದು ಕ್ರಮೇಣ ಇದು ಕಡಿಮೆಯಾಗಿದೆ.

**ಆಹಾರ ಪದ್ಧತಿ**

ಮೊದಲಿನಿಂದಲೂ ಅನೇಕ ಆಹಾರ ಪದಾರ್ಥಗಳನ್ನು ಬಳಸಿ ರುಚಿಕರ ಅಡುಗೆ ಮಾಡುವ ಕಲೆಯನ್ನು ಈ ಪ್ರದೇಶದಲ್ಲಿ ಕರಗತಮಾಡಿಕೊಂಡಿದ್ದಾರೆ. ಈ ಕುಡುತಿನಿ ಶಾಸನಗಳು ನೇರವಾಗಿ ಉಲ್ಲೇಖಿಸಿಲ್ಲವಾದರೂ ದಿನನಿತ್ಯ ಆಹಾರ ಪದಾರ್ಥಗಳಿಗೆ ಬಳಸುವ ವಸ್ತುಗಳ ದಾನ ದತ್ತಿ ಬಿಡುವಾಗ ಜೀರಿಗೆ, ಹಜಾವಾನ, ಜಿಡ್ಡು ಪದಾರ್ಥಗಳಾದ ಹಾಲು, ಮೊಸರು, ಬೆಣ್ಣೆ, ಎಣ್ಣೆಗಳು ಅಲ್ಲದೇ ಅನೇಕ ತರಕಾರಿ ಮತ್ತು ಜೊತೆಗೆ ಹಣ್ಣುಗಳನ್ನು ಬಳಸುತ್ತಿದ್ದ ಬಗ್ಗೆ ಉಲ್ಲೇಖವಿದೆ. ಆಹಾರಕ್ಕಾಗಿ ಜೊತೆಗೆ ವಿಳ್ಯಾ ಎಲೆ ಅಡಿಕೆ ಪ್ರಮುಖವಾಗಿತ್ತು. ಇವುಗಳನ್ನು ಪೂಜಾ ಕಾರ್ಯಗಳಿಗೆ ಹಾಗೂ ಊಟವಾದ ಮೇಲೆ ಬಳಸುತ್ತಿದ್ದರು ಎನ್ನುವುದನ್ನು ಶಾಸನಗಳಲ್ಲಿ ಕಾಣಬಹುದು.

**ಉಡುಪು ಆಭರಣ**

ಕುಡುತಿನಿಯಲ್ಲಿ ಸ್ತ್ರೀ ಮತ್ತು ಪುರುಷರು ಇಲ್ಲಿನ ವಾತಾವರಣಕ್ಕೆ ತಕ್ಕಂತೆ ಹತ್ತಿ, ರೇಷ್ಮೆ ಉಡುಪುಗಳನ್ನು ಧರಿಸುತ್ತಿದ್ದು, ಸ್ತ್ರೀಯರು ಸೀರೆ ಕುಪ್ಪಸವನ್ನು, ಗಂಡಸರು ಪಂಚೆ ನಿಲುವಂಗಿ ತಲೆಗೆ ರುಮಾಲು ಧರಿಸುತ್ತಿದ್ದರು. ಸ್ತ್ರೀ ಮತ್ತು ಪುರುಷರು ಇಬ್ಬರು ಆಭರಣ ಪ್ರಿಯರಾಗಿದ್ದರು. ಸ್ತ್ರೀ ಓಲೆ, ಮೂಗುತಿ, ಕೈಬಳೆ, ಉಂಗುರ, ಬಳೆ, ಡಾಬು, ಕಂಟಹಾರ, ಮುತ್ತಿನ ಸರಗಳನ್ನು ಧರಿಸುತ್ತಿದ್ದರು. ಇತ್ತೀಚಿಗೆ ಬಂಗಾರದ ಆಭರಣವನ್ನು ಎಲ್ಲಾ ವರ್ಗದವರು ಧರಿಸುತ್ತಾರೆ. ಒಟ್ಟಾರೆ ಸಾಮಾಜಿಕ ನಂಬಿಕೆ ಸಂಪ್ರದಾಯಗಳನ್ನು ಒಳಗೊಂಡಂತೆ ಅನೇಕ ಕಟ್ಟಳೆಗಳು ಜಾರಿಯಲ್ಲಿದ್ದವು.

**೪.೩. ಆರ್ಥಿಕ ಜೀವನ**

ಸಮಾಜದ ಆಧಾರ ಸ್ಥಂಭವೆಂದರೆ ಅರ್ಥ ವ್ಯವಸ್ಥೆ. ಸಮಾಜದ ಎಲ್ಲಾ ಕಾರ್ಯಗಳು ಅರ್ಥಿಕ ವ್ಯವಸ್ಥೆಯ ಮೇಲೆ ನಿರ್ಧರಿತವಾಗಿರುತ್ತವೆ. ಕುಡತಿನಿ ಪರಿಸರವು ಖನಿಜ ಸಂಪ್ಮೂಲಗಳನ್ನು ಹೊಂದಿದ್ದು, ಗ್ರಾಮದ ಸುತ್ತಲು ಅನೇಕ ಕೈಗಾರಿಕೆಗಳು ಸ್ಥಾಪನೆಯಾಗಿದ್ದು ಇಲ್ಲಿ ಬಹುತೇಕ ಜನರಿಗೆ ಉದ್ಯೋಗವನ್ನು ನೀಡಿವೆ. ಆದರೂ ಇಲ್ಲಿ ಕೆಲವರು ಕೃಷಿ ಮತ್ತು

ಹೈನುಗಾರಿಕೆಯಂತಹ ವೃತ್ತಿಗಳನ್ನು ಮಾಡುತ್ತಿದ್ದಾರೆ. ಅದರೂ ಇವರ ಪ್ರಮಾಣ ಕಡಿಮೆ ಎಂದು ಹೇಳಬಹುದು. ಕೈಗಾರಿಕೆಗಳೇ ಇಲ್ಲಿನ ನಿರ್ಧಾರಕ ಘಟಕಗಳಾಗಿವೆ.

**ಕೃಷಿ**

ಕುಡತಿನಿ ಪ್ರದೇಶದ ಪಶ್ಚಿಮಕ್ಕೆ ಸಂಡೂರು ಬೆಟ್ಟಗಳು ಇರುವುದರಿಂದ ಮತ್ತು ಮಳೆಯ ನೆರಳಿನ ಪ್ರದೇಶದಲ್ಲಿ ಬರುವುದರಿಂದ ಇಲ್ಲಿ ಅತ್ಯಂತ ಕಡಿಮೆ ಪ್ರಮಾಣದ ಮಳೆಯನ್ನು ಪಡೆಯುತ್ತದೆ. ಹಾಗಾಗಿ ಇಲ್ಲಿನ ಬಹುತೇಕ ಕೃಷಿ ಪ್ರದೇಶವು ಮಳೆಯಾಶ್ರಿತವಾಗಿದ್ದು, ಅಲ್ಪ ಪ್ರಮಾಣದ ಕೃಷಿ ಭೂಮಿ ಮಾತ್ರ ತುಂಗಾಭದ್ರ ನಾಲೆಗಳಿಂದ ನೀರನ್ನು ಪಡೆದುಕೊಳ್ಳುತ್ತದೆ[೧೮]. ಇನ್ನು ಕೆಲವು ರೈತರು ಕೆರೆ, ಬಾವಿ ಮತ್ತು ಅಂರ್ತಜಲವನ್ನು ಬಳಸಿಕೊಂಡು ವ್ಯವಸಾಯ ಮಾಡುತ್ತಾರೆ. ಇಲ್ಲಿ ಮುಖ್ಯವಾಗಿ ರೈತರು ಗೋದಿ, ಹತ್ತಿ, ರಾಗಿ, ಜೋಳ, ಕಡಲೆ, ಸೂರ್ಯಕಾಂತಿ, ಸೊಪ್ಪು ತರಕಾರಿ ಬೆಳೆಗಳನ್ನು ಬೆಳೆಯುತ್ತಾರೆ.

**ಹೈನುಗಾರಿಕೆ**

ಪ್ರಾಚೀನ ಕಾಲದಲ್ಲಿ ಈ ಪ್ರದೇಶವು ಹಚ್ಚಹಸಿರಿನ ಕಾಡುಗಳಿಂದ ಕೂಡಿದ್ದರಿಂದ ಇಲ್ಲಿ ಹೇರಳವಾಗಿ ಗೋವುಗಳನ್ನು ಸಾಕಲಾಗುತ್ತಿತ್ತು. ಕಾಲಾನಂತರದಲ್ಲಿ ಈ ಪರಿಸರವು ಕಡಿಮೆ ಪ್ರಮಾಣದ ಮಳೆಯನ್ನು ಪಡೆಯುವುದರಿಂದ ಇಲ್ಲಿ ಹೆಚ್ಚಾಗಿ ಕುರುಚಲು ಸಸ್ಯವರ್ಗ ಹೆಚ್ಚಾಗಿ ಕಂಡುಬರುತ್ತದೆ. ಸಾಮಾನ್ಯವಾಗಿ ಮಳೆಗಾಲದಲ್ಲಿ ಮಾತ್ರ ಬೆಟ್ಟ-ಗುಡ್ಡಗಳ ಕಣಿವೆ ಪ್ರದೇಶದಲ್ಲಿ ಹುಲ್ಲುಗಾವಲು ಕಂಡುಬರುತ್ತದೆ. ಹಾಗಾಗಿ ಇಲ್ಲಿನ ಜನರು ಕುರಿ, ಮೇಕೆ ಮತ್ತು ಕೋಳಿ ಸಾಕಾಣಿಕೆ ಮಾಡುವುದನ್ನು ಕಾಣಬಹುದಾಗಿದೆ. ಈ ಪ್ರದೇಶದಲ್ಲಿ ವೀರಗಲ್ಲುಗಳನ್ನು ಗಮನಿಸಿದಾಗ ಈ ಪ್ರದೇಶದಲ್ಲಿ ದರೋಡೆಕೊರರು ಗೋವು ಮತ್ತು ಸಂಪತ್ತನ್ನು ಅಪಹರಿಸುವ ಸಂದರ್ಭದಲ್ಲಿ ಈ ಪ್ರದೇಶದ ವೀರರು ಅವುಗಳನ್ನು ಸಂರಕ್ಷಿಸಿ ಹೋರಾಟ ಮಾಡಿ ಮಡಿದಿದ್ದ ಕಾರಣ ಈ ವೀರಗಲ್ಲುಗಳನ್ನು ಕುಡತಿನಿ ಪ್ರದೇಶದಲ್ಲಿ ಹೆಚ್ಚಾಗಿ ಕಾಣಬಹುದು.

**ಗುಡಿ ಕೈಗಾರಿಕೆ**

ಈ ಪ್ರದೇಶದಲ್ಲಿ ಕೃಷಿ ಮತ್ತು ಹೈನುಗಾರಿಕೆಯಂತಹ ವೃತ್ತಿಗಳ ಜೊತೆಗೆ ಕೆಲವು ಗುಡಿ ಕೈಗಾರಿಕೆಗಳು ಬೆಳೆದು ಬಂದಿವೆ. ಅವುಗಳಲ್ಲಿ ಎಣ್ಣೆ, ಬೆಲ್ಲದ ತಯಾರಿಕೆ ಪ್ರಮುಖವಾಗಿವೆ. ಕುಡತಿನಿ ಪ್ರದೇಶದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹೆಚ್ಚಾಗಿ ಕಬ್ಬನ್ನು ಬೆಳೆಯುವುದರಿಂದ ಬೆಲ್ಲದ ತಯಾರಿಕೆ ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿನ 'ಬೆಲ್ಲವು ಉತ್ತಮ ಗುಣಮಟ್ಟವನ್ನು

ಹೊಂದಿರುವುದರಿಂದ ರಾಜ್ಯದ ವಿವಿಧ ಪ್ರದೇಶಗಳಿಗೆ ಇಲ್ಲಿನ ಬೆಲ್ಲವು ರಫ್ತಾಗುವುದನ್ನು ಕಾಣಬಹುದು.

**ಗಣಿಗಾರಿಕೆ**

ಪ್ರಸ್ತುತ ಕುಡತಿನಿ ಎಂಬ ಹೆಸರು ಎಂದಾಕ್ಷಣ ಮೊಟ್ಟ ಮೊದಲು ಜ್ಞಾಪಕವಾಗುವುದು ಈ ಗಣಿಗಾರಿಕೆಯೇ ಆಗಿದೆ. ಈ ಪ್ರದೇಶದ ಸುತ್ತ-ಮುತ್ತಲಿನ ಭೂಮಿಯು ಹೆಚ್ಚು ಕಬ್ಬಿಣದ ಅದಿರನ್ನು ಹೊಂದಿದ್ದು ಈ ಗಣಿಗಾರಿಕೆಯಿಂದ ಇಡೀ ಜಿಲ್ಲೆಗೆ ಮಾತ್ರವಲ್ಲದೇ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿದೆ. ಈ ಪ್ರದೇಶದ ಚರಿತ್ರೆಯನ್ನು ಗಮನಿಸಿದಾಗ ಹಲವಾರು ಶಾಸನಗಳಲ್ಲಿ ಲೋಹಸನಿ ಮತ್ತು ದಂಡಾಸನಿ ಎಂದು ಉಲ್ಲೇಖಗಳಿದ್ದು ಈ ಕುಡತಿನಿ ಪ್ರದೇಶವು ಕಬ್ಬಿಣ ಉತ್ಪಾದನೆಯ ಪ್ರಮುಖ ಕಾರ್ಯಾಗಾರವಾಗಿತ್ತು. ತಪೋವನಾಧಿಪತಿಗಳು ಒಡೆಯರಾಗಿದ್ದು ಮುಖ್ಯವಾಗಿ ಲೋಹಸನಿ-ದಂಡಾಸನಿ ಎಂದು ಮುಖ್ಯಸ್ಥರು ಕರೆದಿರಬಹುದು.

**ನಾಣ್ಯಗಳು**

ನಾಣ್ಯಗಳು ಕುಡತಿನಿ ಈ ಪ್ರದೇಶವು ಚಾಲುಕ್ಯರ ಕಾಲದಲ್ಲಿ ಟಂಕಸಾಲೆಯನ್ನು ಹೊಂದಿತ್ತು ಎಂದು ಶಾಸನಗಳು ತಿಳಿಸಿವೆ. ಈ ಪ್ರದೇಶವು ಕಾರ್ತಿಕೇಯನು ಹೆಚ್ಚು ಪ್ರಸಿದ್ಧ ಹಾಗೂ ಪೂಜ್ಯನೀಯವಾಗಿರುವುದರಿಂದ ನವಿಲು ಕಾರ್ತಿಕೇಯನ ವಾಹನವಾಗಿರುವುದರಿಂದ ನವಿಲುಪೊನ್ನು ಎಂಬ ನಾಣ್ಯವು ಬಾದಾಮಿ ಚಾಲುಕ್ಯರ ಕಾಲದಲ್ಲಿ ಚಾಲನೆಯಲ್ಲಿತ್ತು[೧೯]. ಮುಖ್ಯವಾಗಿ ಲೊಕ್ಕಪಣ ಎಂಬ ಬಂಗಾರದ ನಾಣ್ಯ, ಉಲ್ಲೇಖವನ್ನು ಸಹ ಶಾಸನಗಳಲ್ಲಿ ಕಾಣಬಹುದಾಗಿದೆ.

**೪.೪ ಧಾರ್ಮಿಕ ಜೀವನ**

ಭಾರತವು ಅನೇಕ ಧರ್ಮ ಮತ್ತು ವಿಭಿನ್ನ ಆಚರಣೆಗಳ ತವರೂರು. ಪ್ರಾಚಿನ ಕಾಲದಿಂದ ವಿವಿಧ ಧರ್ಮಗಳೂ ರಾಜಾಶ್ರಯ ಪಡೆದು ಬೆಳೆವಣಿಗೆ ಹೊಂದುತ್ತಾ ಬಂದಿವೆ. ನಂಬಿಕೆ ಮತ್ತು ಆಚರಣೆ ಸಾಂಪ್ರದಾಯಗಳ ಹಿನ್ನೆಲೆಯಲ್ಲಿ ಬೆಳವಣಿಗೆ ಕಂಡುಬಂದು ಈ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಪ್ರಭಾವವನ್ನು ಬೀರಿವೆ. ಅವುಗಳಲ್ಲಿ ಶೈವ, ವೈಷ್ಣವ, ಬೌದ್ಧ ಮತ್ತು ಜೈನ ಪ್ರಮುಖವಾದವು.

**ಶೈವ ಧರ್ಮ**

ಈ ಪ್ರದೇಶವನ್ನು ನಾವು ಸೂಕ್ಷ್ಮವಾಗಿ ಗಮನಿಸಿದಾಗ ಇಡೀ ಗ್ರಾಮದಲ್ಲಿ ೨೦೦ಕ್ಕೂ ಹೆಚ್ಚು ದೇವಾಲಯಗಳಿದ್ದು, ಅದರಲ್ಲಿ ಶೇಕಡ ೭೦% ಶೈವ ದೇವಾಲಯಗಳನ್ನು ಕಾಣಬಹುದಾಗಿದೆ. ಮುಖ್ಯವಾಗಿ ಈ ಗ್ರಾಮದಲ್ಲಿ ಶೈವ ಧರ್ಮವೇ ಅಗ್ರಗಣ್ಯವಾಗಿ ಪೋಷಣೆಗೆ ಒಳಪಡುತ್ತಾ ಬಂದಿರುವುದನ್ನು ಕಾಣಬಹುದು. ಮುಖ್ಯವಾಗಿ ತಪೋವನಾಧಿಪತಿಗಳು ಎಂದು ಶಾಸನಗಗಳಲ್ಲಿ ಉಲ್ಲೇಖವಾದ ವಿಷಯವು ಇವೆಲ್ಲ ಈ ಕುಡತಿನಿ ಪ್ರದೇಶದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು ಎಂದು ನಮಗೆ ತಿಳಿದು ಬರುತ್ತದೆ. ದಂಡಾಸನಿ ಎಂದು ಶಾಸನಗಳಲ್ಲಿ ಗುರುತಿಸಿಕೊಂಡಿರುವುದನ್ನು ಕಾಣಬಹುದು.

**ವೈಷ್ಣವ ಧರ್ಮ**

ಈ ಕುಡತಿನಿ ಪರಿಸರದಲ್ಲಿ ಪ್ರಾಚೀನಕಾಲದಲ್ಲಿ ಶೈವ, ಜೈನ ಮತ್ತು ವೈಷ್ಣವ ಧರ್ಮಗಳಿಗೆ ರಾಜಾಶ್ರಯ ಪಡೆಯುತ್ತಾ ಬೆಳೆಯುತ್ತಾ ಬಂದಿದೆ. ಈ ಪ್ರದೇಶದಲ್ಲಿ ಇತರ ಶಿಲ್ಪಗಳಂತೆ ವೈಷ್ಣವ ಶಿಲ್ಪಗಳನ್ನು ಹೆಚ್ಚಾಗಿ ಕಂಡುಬರುತ್ತವೆ. ಪ್ರಸ್ತುತ ಕನಕೇರಿ ಆಂಜನೇಯ ದೇವಾಲಯದ ಭಿತ್ತಿಯ ಮೇಲೆ ವಿಷ್ಣುವಿನ ಶಿಲ್ಪವಿರುವುದನ್ನು ಕಾಣಬಹುದು ಮತ್ತು ಗ್ರಾಮದ ಮಧ್ಯಭಾಗದಲ್ಲಿ ಶ್ರೀ ವೆಂಕಟೇಶ್ವರ ದೇವಾಲಯವಿರುವುದನ್ನು ಕಾಣಬಹುದು. ಇವುಗಳು ಈ ಪ್ರದೇಶದಲ್ಲಿ ವೈಷ್ಣವ ಧರ್ಮದ ಬಗ್ಗೆ ತಿಳಿಸಿಕೊಡುತ್ತವೆ[೨೦].

**ಜೈನಧರ್ಮ**

ಈ ಕುಡತಿನಿ ಪರಿಸರದಲ್ಲಿ ಪ್ರಾಚೀನ ಕಾಲದಿಂದಲೂ ಹೆಚ್ಚಾಗಿ ಜೈನ ಬಸದಿಗಳು ಕಂಡುಬರುತ್ತವೆ. ಮುಖ್ಯವಾಗಿ ಕುಡತಿನಿ, ಸಿಂದವಾಳ, ಕೊಗಳಿ, ಬಾಗಳಿ ಮೊದಲಾದ ಗ್ರಾಮಗಳಲ್ಲಿ ಜೈನ ಬಸದಿಗಳ ಅವಶೇಷಗಳನ್ನು ಇಂದಿಗೂ ಕಾಣಬಹುದು. ಅವುಗಳಲ್ಲಿ ಕೆಲವೊಂದು ಶೈವ ದೇವಾಲಯಗಳಾಗಿ ಮಾರ್ಪಟ್ಟಿವೆ. ಹಲವು ಜೈನ ಬಸದಿಗಳು ಸಂರಕ್ಷಣೆಯಿಲ್ಲದೇ ನಾಶದ ಅಂಚಿನಲ್ಲಿವೆ. ಈ ಕುಡತಿನಿ ಪ್ರದೇಶದಲ್ಲಿ ಕನ್ನಡ ನಾಡಿನ ಅರಸು ಮನೆತನಗಳಾದ ಬಾದಾಮಿ ಚಾಲುಕ್ಯ, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳ ಅರಸರು ಜೈನ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಹಾಗಾಗಿ ಈ ಕುಡತಿನಿ ಪರಿಸರದಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಬಸದಿಗಳು ಮತ್ತು ಬಸದಿಗಳಿಗೆ ದಾನದತ್ತಿ ನೀಡಿದ ಬಗ್ಗೆ ಶಾಸನಗಳು ಹೆಚ್ಚಾಗಿ ಕಂಡುಬರುವುದನ್ನು ಇಂದಿಗೂ ಕಾಣಬಹುದು[೨೧].

## ಬೌದ್ಧ ಧರ್ಮ

ಉತ್ತರ ಭಾರತದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದ ಈ ಧರ್ಮ ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಈ ಧರ್ಮಕ್ಕೆ ಸಂಬಂಧಿಸಿದ ಕೆಲವು ಅವಶೇಷಗಳು ದೊರೆತ್ತಿದ್ದರಿಂದ ಪ್ರಾಚೀನ ಮಧ್ಯಕಾಲದಲ್ಲಿ ಇಲ್ಲಿ ಇತ್ತು ಎಂದು ತಿಳಿಯುತ್ತದೆ. ಈ ಪ್ರದೇಶದ ಕುಡುತಿನಿ ಸುತ್ತಮುತ್ತಲಿನ ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಕೊಪ್ಪಳ, ಬಳ್ಳಾರಿಯ ಅಶೋಕನ ಶಾಸನಗಳು ಬೌದ್ಧಧರ್ಮದ ಸಾರವನ್ನು ತಿಳಿಸುತ್ತದೆ. ಈ ಪ್ರದೇಶದಲ್ಲಿ ಬೌದ್ಧಧರ್ಮದ ಚಟುವಟಿಕೆಗಳು ಇದ್ದುವು ಎಂದು ತಿಳಿದುಬರುತ್ತದೆ.

**ಕೊನೆ ಟಿಪ್ಪಣಿಗಳು**

೧. ಕ.ವಿ.ಶಾ.ಸಂ.೧., ಶಾ.ಸಂ.೪೧., ೯೨೦., ಕುಡತಿನಿ (ಬಳ್ಳಾರಿ ತಾ.).

೨. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪು.೫೦.

೩. ಅದೇ,ಪು.೫೧.

೪. ಅದೇ, ೨೦೧೨, ಪು.೫೧.

೫. ಕ.ವಿ.ಶಾ.ಸಂ.೧., ಶಾ.ಸಂ.೪೧., ೯೮೧., ಕುಡತಿನಿ (ಬಳ್ಳಾರಿ ತಾ.).

೬. ವಾಸುದೇವ ಬಡಿಗೇರ, ೨೦೧೨, ಪೂರ್ವೋಕ್ತ, ಪು.೫೨.

೭. ಕ.ವಿ.ಶಾ.ಸಂ.೧., ಶಾ.ಸಂ.೪೯., ೧೦೫೦., ಕುಡತಿನಿ (ಬಳ್ಳಾರಿ ತಾ.).

೮. ವಾಸುದೇವ ಬಡಿಗೇರ, ೧೯೯೭., ಸಂಡೂರು ಪರಿಸರದ ಕಾರ್ತಿಕೇಯ ತಪೋವನ,ಪು.೩೭.

೯. ಅದೇ, ಪು.೩೭.

೧೦. ಅದೇ, ಪು.೩೭.

೧೧. ಕ.ವಿ.ಶಾ.ಸಂ.೧., ಶಾ.ಸಂ.೪೦., ೧೧೪೯., ಕುಡತಿನಿ (ಬಳ್ಳಾರಿ ತಾ.).

೧೨. ವಾಸುದೇವ ಬಡಿಗೇರ, ೧೯೯೭, ಪೂರ್ವೋಕ್ತ, ಪು.೩೮.

೧೩. ಅದೇ,ಪು.೩೮.

೧೪. ಅದೇ, ಪು.೩೮.

೧೫. ಕ.ವಿ.ಶಾ.ಸಂ.೧., ಶಾ.ಸಂ.೪೭., ೧೨೧೯., ಕುಡತಿನಿ (ಬಳ್ಳಾರಿ ತಾ.).

೧೬. ಕ.ವಿ.ಶಾ.ಸಂ.೧., ಶಾ.ಸಂ.೪೬., ೧೫೩೨., ಕುಡತಿನಿ (ಬಳ್ಳಾರಿ ತಾ.).

೧೭. ವಾಸುದೇವ ಬಡಿಗೇರ, ೨೦೧೨, ಪೂರ್ವೋಕ್ತ, ಪು.೧೭೪.

೧೮. ಅದೇ, ಪು.೨೩೩.

೧೯. ಅದೇ, ಪು.೨೪೭.

೨೦. ಅದೇ, ಪು.೨೬೪.

೨೧. ಅದೇ, ಪು.೨೬೨.

# ೫. ನಂಬಿಕೆ ಮತ್ತು ಸಂಪ್ರದಾಯಗಳು

೫.೧. ಐತಿಹ್ಯ

೫.೨. ಜಾತ್ರೆ

೫.೩. ಉತ್ಸವ

# ಅಧ್ಯಾಯ – ೫

## ನಂಬಿಕೆ ಮತ್ತು ಸಂಪ್ರದಾಯಗಳು

### ೫.೧ ಐತಿಹ್ಯಗಳು

**ಐತಿಹ್ಯ**

ಇತಿ, ಇತಿಹ ಎನ್ನುವ ಸಂಸ್ಕೃತ ರೂಪದಿಂದ 'ಐತಿಹ್ಯ'ವು ನಿಷ್ಪನ್ನವಾಗಿದ್ದು ಈ ಶಬ್ದ ರೂಪಗಳಿಗೆ ಹೀಗೆ, ಹೀಗಿತ್ತು. ಹೀಗೆ ನಡೆದದ್ದು ಎಂಬ ಇತ್ಯಾದಿ ಅರ್ಥಗಳಿವೆ. ಅದರಂತೆ ಇಂದು ನಾವು ಯಾವುದನ್ನು 'ಐತಿಹ್ಯ' ಎಂದು ಗುರುತಿಸುತ್ತವೆಯೋ ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆಯೆಂಬ ವಿಶ್ವಾಸ ಅದರ ನಿರೂಪಕದಲ್ಲಿರುತ್ತದೆ.

ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ, ಈ ಹಿಂದೆ ವಾಸ್ತವವಾಗಿ ನಡೆದಿರಲೇಬೇಕು ಎಂಬ ವಿಶ್ವಾಸವಿರುವ ಘಟನೆಗಳ ಗದ್ಯರೂಪದ ನಿರೂಪಣೆ, ಇಲ್ಲಿ ಲಿಖಿತ ದಾಖಲೆಗಳೇನ್ನು ಇರುವುದಿಲ್ಲ. ಬದಲಾಗಿ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ-ಸಂಬಂಧ ಕಂಡುಬರಬಹುದು. ಜಗತ್ತಿನ ಮೌಖಿಕ ಚರಿತ್ರೆ ಐತಿಹ್ಯವಾದರೆ, ಅದಕ್ಕೆ ಪ್ರತಿಯಾದದ್ದು ಇತಿಹಾಸ. ಐತಿಹ್ಯ ಮತ್ತು ಇತಿಹಾಸ ಪದಗಳಾಗಿವೆ.

**ಬೂದಿದಿಬ್ಬದ ಬಗ್ಗೆ ಇರುವ ಐತಿಹ್ಯ**

ಸ್ಥಳೀಯ ಜನರ ಪ್ರಕಾರ ಬಹಳ ಹಿಂದಿನಕಾಲದಲ್ಲಿ ಸುಡುವ ವಿಧಾನದಿಂದ ಶವ ಸಂಸ್ಕಾರ ಮಾಡುತ್ತಿದ್ದ ಜನ ವರ್ಗಗಳ ಪ್ರಸಿದ್ಧ ಶೂರರ ನೆನಪಿನಲ್ಲಿ ಅಗಾಗ್ಗೆ ಇಂಥ ದೊಡ್ಡ ಪ್ರಮಾಣದ ಸಗಣಿಯನ್ನು ಸುಡುವ ಆಚರಣೆ ಇದ್ದಿರಬೇಕು. ಕುಡತಿನಿ ಸಮೀಪದ ಬೂದಿಗುಡ್ಡೆಯು ಮಹಾಭಾರತದ ಹಿಡಿಂಬಾಸುರನನ್ನು ಸುಟ್ಟಿದ್ದರಿಂದಾಗಿಯೇ ಉಂಟಾಯಿತೆಂದು ಸ್ಥಳೀಯ ಹೇಳಿಕೆ.

**ಕುರುಬ ಸಮುದಾಯದ ಐತಿಹ್ಯ**

ಕುರುಬ ಸಮುದಾಯವು ಕುರಿಗೆ ಮೊದಲ ಸ್ಥಾನಕೊಟ್ಟಿದೆ. ಅದು ಅವರ ಕುಲದ ಚಿನ್ನೆಯು ಹೌದು. ಹಾಲುಮತವು ಕುರಿಯನ್ನು ಸಾಕಿ ಸಲುಹಿ ಅವುಗಳ ಹಾಲಿನಿಂದ

ಜೀವನವನ್ನು ಸಾಗಿಸುತ್ತಿತ್ತು. ಅದಕ್ಕೆ ಕುರುಬರು ಹಾಲುಮತದವರೆಂದು ಕರೆಯಿಸಿಕೊಳ್ಳುವರು. ಪಾರ್ವತಿ ಪರಮೇಶ್ವರ ಭೂ ಲೋಕಕ್ಕೆ ಬಂದಿರುವಾಗ ಪಾರ್ವತಿಯು ಪ್ರಕೃತಿಯ ನಿಸರ್ಗ ಸೌಂದರ್ಯಕ್ಕೆ ಸೋಲುವಳು. ಆಗ ಆಕೆಯ ಎದೆಹಾಲು ಸುರಿಯುತ್ತವೆ. ಆ ಎದೆ ಹಾಲಿನಿಂದ ಎರಡು ಬೊಂಬೆಗಳನ್ನು ತಯಾರಿಸಿ ಶಿವನಿಂದ ಜೀವ ಬರಿಸುವಳು. ಈ ರೀತಿಯಾಗಿ ಜನಿಸಿದ ಮುದ್ದಗೊಂಡ ಮುದ್ದವೆಯರ ಕುಲವೇ ಹಾಲುಮತವೆಂದು ಕರೆಯಲಾಗುತ್ತದೆ.

**ಕೆರೆ**

ಬಸಪ್ಪನೆಂಬ ವ್ಯಕ್ತಿಯು ತನಗೆ ಮಕ್ಕಳಿಲ್ಲವೆಂಬ ಕಾರಣಕ್ಕಾಗಿ ಒಂದು ಕುಂಟೆಯನ್ನು ಕಟ್ಟಿಸುತ್ತಾನೆ. ದನ-ಕರುಗಳಿಗೆ ಬೇಸಿಗೆಯಲ್ಲಿ ನೀರಿನ ಕೊರತೆಯಾಗುವುದರಿಂದ ಈ ಮೂಲಕ ಆಶ್ರಯ ಒದಗಿಸಿ ಪುಣ್ಯ ಪಡೆದುಕೊಳ್ಳಬೇಕೆಂಬ ಹಂಬಲ 'ಕುಂಟೆಗಳ' ನಿರ್ಮಾಣದ ಹಿಂದಿನ ಆಶಯವಾಗಿರುತ್ತದೆ. ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲ ಎಂಬ ನಂಬಿಕೆ ಇದೆ. ಜನಪದದಲ್ಲಿ ಸಂತಾನ ರಹಿತರು ಬಾವಿಯನ್ನು ತೋಡಿಸುವುದು ಇಲ್ಲವೇ ಕುಂಟೆಯನ್ನು ಕಟ್ಟಿಸುವುದು ಇತ್ಯಾದಿ ಕುಡಿಯುವ ನೀರಿನ ಸೌಲಭ್ಯ ಒದಗಿಸುವ ಮೂಲಕ ಮೋಕ್ಷಕ್ಕೆ ಸಲ್ಲುತ್ತಾರೆಂದು ಭರವಸೆಯ ನಂಬಿಕೆ ಜನಪದರಲ್ಲಿದೆ.

**ಕೆರೆ-ಬಾವಿ**

ಕೆರಿ-ಬಾವಿಗಳಲ್ಲಿ ನೀರು ನಿಲ್ಲದಿದ್ದರೆ ಅದು ಕೆರೆ ಬಾವಿಗಳನ್ನು ಕಟ್ಟಿದ ವಡ್ಡರು ಶಾಪ ಹಾಕಿದ್ದಾರೆಂಬ ನಂಬಿಕೆಗಳಿವೆ. ಕಷ್ಟಪಟ್ಟ ವಡ್ಡರಿಗೆ ತಕ್ಕ ಸಂಭಾವನೆ ನೀಡದಿದ್ದರೆ ಅವರು ನೀರು ಉಳಿಯಲೆಂದು ಶಾಪ ಹಾಕಿದ ಘಟನೆಗಳಿಗೆ ಸಂಬಂಧಿಸಿದ ಐತಿಹ್ಯವಿದೆ. ಆದರೆ ಈ ಶಾಪಕ್ಕೆ ಪರಿಹಾರವೇ ಇಲ್ಲ, ಬಲಿಕೊಡುವ ಮೂಲಕ ನೀರನ್ನು ತರಿಸಿಕೊಳ್ಳುವ ಪ್ರಮೇಯವು ಎದುರಾಗುವುದು.

**ಗಂಗಮ್ಮ**

ಗಂಗಮ್ಮನೊಂದಿಗೆ ಸಪ್ತ ಮಾತೃಕೆಯರು ರಾತ್ರಿ ವೇಳೆ ಸೇರುತ್ತಾರಂತೆ, ರಾತ್ರಿ ವೇಳೆ ಈ ಸ್ಥಳದಲ್ಲಿ ಉಳಿದವರು ರಕ್ತ, ವಾಂತಿ ಮಾಡಿ ಸಾಯುತ್ತಾರೆ. ಬಳೆಗಾರನೊಬ್ಬ ಹೊರಡಲು ತಡವಾಗಿ ಒಂದು ರಾತ್ರಿ ಉಳಿದಿದ್ದ, ಬೆಳಕು ಹರಿಯುವ ಸಮಯಕ್ಕೆ ಸತ್ತಿದ್ದನೆಂಬ ಐತಿಹ್ಯವಿದೆ.

## ಮಕರ ಸಂಕ್ರಮಣ

ಮಕರ ಸಂಕ್ರಮಣದ ಆಚರಣೆಗೆ ಸಂಬಂಧಿಸಿದಂತೆ ಪುರುಷನು ಭೂಮಿಗೆ ಬರುವ; ಫಲಾ–ಫಲಗಳನ್ನು ಕೊಡುವ ನಂಬಿಕೆ ಪ್ರತಿವರ್ಷವೂ ಸಂಬಂಧಿಸಿದ ಐತಿಹ್ಯಗಳನ್ನು ಕಾಣಬಹುದಾಗಿದೆ.

## ಸೂರ್ಯಗ್ರಹಣ ಮತ್ತು ಚಂದ್ರ ಗ್ರಹಣ ಸಂಬಂಧಿಸಿದ ಪುರಾಣ ಮತ್ತು ನಂಬಿಕೆಗಳು

ರಾಹು–ಕೇತುಗಳೆಂಬ ಗ್ರಹಗಳು ದೇವತೆಗಳ ವೇಷದಲ್ಲಿ, ದೇವತೆಗಳು ಅಮರತ್ವಕ್ಕಾಗಿ ಅಮೃತ ಸೇವಿಸುತ್ತಿದ್ದ ಸಮಾರಂಭದಲ್ಲಿ ಭಾಗವಹಿಸಿದ್ದರು. ಸೂರ್ಯ ಚಂದ್ರನು ಅಮೃತವನ್ನು ಬಡಿಸುತ್ತಿದ್ದರು. ರಾಹು– ಕೇತುಗಳ ಎಲೆಗೂ ಅಮೃತವನ್ನು ಬಡಿಸಿ ಆಗಿತ್ತು[೧]. ಅವರಿಬ್ಬರೂ ಅಮೃತವನ್ನು ಬಾಯಲ್ಲಿಟ್ಟು ನುಂಗಬೇಕು ಅನ್ನುವಷ್ಟರಲ್ಲಿ ಸೂರ್ಯ–ಚಂದ್ರರಿಗೆ ಅವರ ಗುರುತು ಸಿಕ್ಕಿತು. ಅಮೃತವು ಗ್ರಹಗಳ ಹೊಟ್ಟೆಗೆ ಇಳಿಯುವ ಮುನ್ನವೇ ತಲೆಗಳನ್ನು ತುಂಡರಿಸಿದರು. ತಕ್ಷಣವೇ ತುಂಡರಿಸಲ್ಪಟ್ಟ ತಲೆಗಳು ಸೂರ್ಯ–ಚಂದ್ರರನ್ನು ನುಂಗಿದವು. ಆದರೆ ಅವರಿಗೆ ಶರೀರವಿಲ್ಲದ್ದರಿಂದ ಗಂಟಲಿನ ಮೂಲಕ ಸೂರ್ಯ–ಚಂದ್ರರು ಹೊರಗೆ ಬಂದರು. ಅಂದಿನಿಂದ ರಾಹು–ಕೇತುಗಳು ವರ್ಷಕ್ಕೊಮ್ಮೆ ಸೂರ್ಯ–ಚಂದ್ರರನ್ನು ನುಂಗುತ್ತಾರೆ. ಇವರು ಕಷ್ಟಪಟ್ಟು ಹೊರ ಬರುತ್ತಾರೆ. ಇದೇ ನಡೆದ ಘಟನೆ ಗ್ರಹಣಕ್ಕೆ ಕಾರಣವೆಂಬ ನಂಬಿಕೆ ಐತಿಹ್ಯ ರೂಪವನ್ನು ನೀಡುತ್ತದೆ[೨].

ಭೂಮಿಯ ಹಿರಿಯ ಮಗ ಸೂರ್ಯ ಮದುವೆಯಾಗಿ ಸುಖವಾಗಿದ್ದಾನೆ. ಚಂದ್ರನು ತನಗೂ ಮದುವೆ ಮಾಡಬೇಕೆಂದು ತಾಯಿಯನ್ನು ಸುತ್ತಿಸುತ್ತಿ ಪೀಡಿಸುತ್ತಾನೆ. ಇವರು ಮೂರು ಜನ ಒಂದೆಡೆ ಸೇರಲಿಲ್ಲ. ಚಂದ್ರನಿಗೆ ಮದುವೆ ಮಾಡಲಿಲ್ಲ. ಇದಕ್ಕೆ ಪೂರಕವಾಗಿ ಸೂರ್ಯನು ಹುಣ್ಣಿಮೆದಿನ ಅಗೋಚರನಾಗುವುದಕ್ಕೆ ಜನಪದರ ಮನಸ್ಸು ಶೋಧಿಸಿದ ರೀತಿ ಹೀಗಿದೆ. ತಾಯಿಗೆ ಕಿರಿಯ ಮಗನಿಗೂ ಮದುವೆ ಮಾಡುವ ಹಂಬಲ ಅವಳು ಸೂರ್ಯನನ್ನು ಸುತ್ತಿ ಸುತ್ತಿ ಚಂದ್ರನಿಗೆ ಹೆಣ್ಣು ನೋಡುವಂತೆ ಎಚ್ಚರಿಸುತ್ತಾಳೆ. ಸೂರ್ಯನಿಗೆ ಮೊದಲು ಮದುವೆಯಾಯಿತು. ಆಗ ಚಂದ್ರನು ತನಗೂ ಮದುವೆ ಮಾಡಬೇಕೆಂದು ಹಠ ಹಿಡಿದನು. ಆಗ ಸೂರ್ಯನು ನೀನು ಇನ್ನೂ ಚಿಕ್ಕವನು ಬೆಳೆದು ಬಾ ಎಂದನು ಅದಕ್ಕೆ ಚಂದ್ರನು ಪೂರ್ಣವಾಗಿ ಬೆಳೆದು ಸೂರ್ಯನಲ್ಲಿಗೆ ಹೋದಾಗಲೆಲ್ಲಾ ಕಣ್ಮರೆಯಾಗುತ್ತಿರುವುದು[೩].

### ೫.೨ ಜಾತ್ರೆಗಳು

'ಯಾನೇನತ್ರಾಯತೇ ಇತಿಯಾತಾ' ಅಂದರೆ ಪುಣ್ಯಕ್ಷೇತ್ರದ ದರ್ಶನಕ್ಕೆ ಹೋಗುವವರ ರಕ್ಷೆಯೇ ಯಾತ್ರೆಯಾಗಿದೆ. ಈ ಯಾತ್ರೆ ಶಬ್ದದ ತದ್ಭವ ರೂಪವೇ ಜಾತ್ರೆ. ಜನ ಪ್ರಾಚೀನ ಕಾಲದಿಂದಲೂ ನಂಬಿಕೊಂಡು ಬಂದಿದ್ದ ದೇವ ದೇವತೆಗಳನ್ನು ಭಯ ಭಕ್ತಿಯಿಂದ ಸಾಮೂಹಿಕವಾಗಿ ಪೂಜಿಸಿ ಪ್ರಾರ್ಥಿಸುವ ಸಂಭ್ರಮದ ಜನಸಮೂಹವೇ "ಜಾತ್ರೆ" ಎನಿಸಿಕೊಂಡಿದೆ[೪]. ಸಮಾಜದೊಂದಿಗೆ ಒಂದಾಗಿ ಬದುಕನ್ನು ಸಾಗಿಸುತ್ತ ಬಂದಿರುವ ಮಾನವನ ವೈಯಕ್ತಿಕ ಮತ್ತು ಸಾಂಘಿಕ ಜೀವನದ ಹಿತರಕ್ಷಣೆಗಾಗಿಯೂ ಮೂಕ ಪ್ರಾಣಿಗಳ ಸುಖಕ್ಕಾಗಿಯೇ ರೋಗ-ರುಜಿನಗಳು ಬಾರದಂತೆ, ಮಳೆ-ಬೆಳೆ ಸರಿಯಾಗಿ ಬರುವಂತೆ ಪ್ರಾರ್ಥಿಸುವ ಉದ್ದೇಶ ಈ ಜಾತ್ರೆದ್ದಾಗಿದ್ದು, ಅದಕ್ಕೆ ಮುಂಚಿತವಾಗಿಯೇ ಹರಕೆ ಹೊತ್ತುವುದನ್ನು ಕಾರ್ಯರೂಪದಲ್ಲಿ ತರುವ ಆಚರಣೆಯೇ ಜಾತ್ರೆಯಾಗಿದೆ.

### ೧. ದೊಡ್ಡ ಆಂಜನೇಯ ಜಾತ್ರೆ

ಕುಡತಿನಿ ಗ್ರಾಮದಲ್ಲಿ ಶ್ರೀ ಸೀತಾ-ರಾಮ ದೇವರ ಹಾಗೂ ಶ್ರೀ ದೊಡ್ಡ ಆಂಜನೇಯ ಸ್ವಾಮಿ ದೇವರ ಜಾತ್ರಾ ಮಹೋತ್ಸವವು ಬಹಳ ವಿಜೃಂಭಣೆಯಿಂದ ಜರುಗುತ್ತಾ ಬಂದಿದೆ. ಈ ಜಾತ್ರೆಯ ಪ್ರತಿವರ್ಷ ಜೂನ್ ತಿಂಗಳಿನಲ್ಲಿ ನಡೆಯುತ್ತದೆ. ಈ ಜಾತ್ರೆಗೆ ಸಂಬಂಧಿಸಿದ ರಥವನ್ನು ಸಿಂಗರಿಸಲು ಸ್ಥಳೀಯ ಹಾಗೂ ಸಾಂಪ್ರದಾಯಿಕವಾಗಿ ವಾಲ್ಮೀಕಿ ಜನರಿಂದ ತೇರು ಕಟ್ಟಿ, ಸಿಂಗರಿಸಿ ತಮ್ಮ ಪ್ರದೇಶದಿಂದ ಕಳಸ ತಂದು ನಂತರವೇ ಈ ರಥೋತ್ಸವು ಆರಂಭವಾಗುತ್ತದೆ. ದೇವಸ್ಥಾನದಿಂದ ಭಕ್ತಾಧಿಗಳಿಂದ ಎಳೆಯುವುದರ ಮೂಲಕ ಪ್ರಾರಂಭಗೊಂಡ ರಥ ಅಲ್ಲಿಯೇ ಸ್ವಲ್ಪ ದೂರವಿರುವ ಎದುರು ಬಸವಣ್ಣನನ್ನು ಪ್ರದಕ್ಷಿಣೆ ಮಾಡಿಕೊಂಡು ನಂತರ ಪುನಃ ಆಂಜನೇಯ ದೇವಸ್ಥಾನಕ್ಕೆ ಹಿಂತಿರುಗುವುದು. ರಥೋತ್ಸವದ ಅಂಗವಾಗಿ ದೇವಸ್ಥಾನದಲ್ಲಿ ಅಂದಿನ ಬೆಳ್ಳಿಗೆಯಿಂದಲೇ ಪೂಜೆ-ಪುನಸ್ಕಾರಗಳು ಆರಂಭವಾಗುತ್ತವೆ. ಮುಖ್ಯವಾಗಿ ಕಂಕಣ ಮಹೋತ್ಸವ, ಪಂಚಾಮೃತ ಅಭಿಷೇಕ, ಹೋಮ ಮುಂತಾದ ಪೂಜಾವಿಧಾನಗಳಿಂದ ದೇವಾಲಯವು ಭಕ್ತಾಧಿಗಳಿಂದ ಕಿಕ್ಕಿರಿಯುತ್ತದೆ. ಮುಖ್ಯವಾಗಿ ಈ ಬಲಿಹರಣದ ಕಂಬಗಳ ಮೇಲೆ ಪ್ರಸಿದ್ಧವನ್ನಿಟ್ಟು ಪೂಜಿಸುವರು. ಇದೇ ಸಂದರ್ಭದಲ್ಲಿ ಸೀತಾರಾಮ ಕಲ್ಯಾಣ ಮಹೋತ್ಸವವನ್ನೂ ಆಚರಿಸುವರು. ಕೊನೆಯ ದಿನದಂದು ಕಂಕಣ ಬಿಚ್ಚುವುದರ ಮುಖಾಂತರ ಭಕ್ತಾಧಿಗಳು ತಮ್ಮ ಇಡೀ ಜೀವನವು ದೇವರ ಕೃಪೆಯಿಂದ ಸುಗಮವಾಗಿ ಸಾಗಲೆಂದು ಪ್ರಾರ್ಥಿಸುವುರೊಂದಿಗೆ ಜಾತ್ರಾ ಮಹೋತ್ಸವು ಕೊನೆಗೊಳ್ಳುತ್ತದೆ.

ಈ ಗ್ರಾಮದಲ್ಲಿ ಕಂಡುಬರುವ ವಿಶೇಷವಾದ ಜಾತ್ರೆಯೆಂದರೆ ದೊಡ್ಡ ಆಂಜನೇಯ ರಥೋತ್ಸವ. ಈ ಜಾತ್ರೆಗೆ ಸುತ್ತಮುತ್ತಲಿನ ಗ್ರಾಮಗಳ ಜನರು ಹೆಚ್ಚು ಸೇರುತ್ತಾರೆ. ರಥೋತ್ಸವದ ಸಂದರ್ಭದಲ್ಲಿ ಸುಮಾರು ೫ ಗಂಟೆ ಸಮಯದಲ್ಲಿ ಎರಡು ಪಲ್ಲಕ್ಕಿಯಲ್ಲಿ ದೇವರನ್ನು ವಾದ್ಯಮೇಳಗಳೊಂದಿಗೆ ರಥದ ಕಡೆಗೆ ತೆಗೆದುಕೊಂಡು ಬರುತ್ತಾರೆ. ಅಲ್ಲಿ ಸೇರಿದ ಎಲ್ಲರೆದಿರಿಗೆ ಇದ್ದ ಎರಡು ತೇರುಗಳಲ್ಲಿ ಒಂದು ಮೂರ್ತಿಯನ್ನು ಸುಮಾರು ೫ ರಿಂದ ೧೦ ಜನರಂತೆ ಹತ್ತಿ ರಥವು ಭಕ್ತಾಧಿಗಳಿಂದ ಎಳೆಯಲ್ಪಡುತ್ತದೆ. ಇಡೀ ಗ್ರಾಮದ ಸಮಸ್ತ ಜನರೆಲ್ಲರು ಆಯಾ ವೃತ್ತಿ ಪರಂಪರೆಗೆ ಅನುಗುಣವಾಗಿ ದೈವಕ್ಕೆ ತಮ್ಮ ಸೇವೆ ಮತ್ತು ಹರಕೆಗಳನ್ನು ಪೂರೈಸಿ ಆ ಸಂವತ್ಸರದಲ್ಲಿ ಮಳೆ, ಬೆಳೆ ಚೆನ್ನಾಗಿ ಬರಲಿ ಊರಲ್ಲಿ ಯಾರಿಗೂ ಯಾವ ರೋಗವು ಬಾರದಿರಲಿ ಇಡೀ ಶಾಂತಿ ಸಮೃದ್ಧಿಯಿಂದಯಿರಲಿಯೆಂದು ಹರಕೆಯನ್ನು ಹೊರುತ್ತಾರೆ. ಜಾತ್ರೆ ಪ್ರಾರಂಭವಾಗುವ ಕೆಲವು ದಿನಗಳ ಮುಂಚಿತವಾಗಿ ಹಬ್ಬದ ಚಟುವಟಿಗೆಗಳು ಪ್ರಾರಂಭವಾಗುತ್ತವೆ. ಊರಿನ ಎಲ್ಲ ದೇವಾಲಯಗಳಿಗೆ ಸುಣ್ಣ-ಬಣ್ಣ ಬಳಿಯುತ್ತಾರೆ. ಜಾತ್ರೆಯು ವಿಜೃಂಭಣೆಯಿಂದ ಆಚರಿಸುವುದರಿಂದ ಹಣದ ಅವಶ್ಯಕತೆ ಹೆಚ್ಚಾಗಿರುತ್ತದೆ. ಈ ಜಾತ್ರೆಯನ್ನು ನಡೆಸಲು ಪ್ರತಿಮನೆಯಿಂದಲೂ ಕನಿಷ್ಟ ಹಣವನ್ನು ನಿಶ್ಚಯಿಸಿ ಸಂಗ್ರಹಿಸುತ್ತಾರೆ. ಅಂದರೆ ತಮ್ಮ ಕುಟುಂಬದ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಹಣ ನೀಡುತ್ತಾರೆ. ಅಲ್ಲದೇ ಪಕ್ಕದ ಊರುಗಳಿಂದ ಬರುವ ಭಕ್ತಾಧಿಗಳಿಗೆ ಮೂಲ ಸೌಕರ್ಯ ಒದಗಿಸುತ್ತಾರೆ.

**೫.೩ ಉತ್ಸವ**

ಕುಡತಿನಿಯ ಗ್ರಾಮ ದೈವಗಳಲ್ಲಿ ಊರಮ್ಮ ದೈವವು ಒಂದು ಸ್ತ್ರೀ ದೈವವಾಗಿದೆ. ಈ ದೈವಕ್ಕೆ ಇಲ್ಲಿಯ ಜನರು ವಿಶೇಷವಾಗಿ ನಡೆದುಕೊಳ್ಳುತ್ತಾರೆ. ಸಾಮಾನ್ಯವಾಗಿ ಎಲ್ಲಾ ಗ್ರಾಮಗಳಲ್ಲಿ ಈ ಗ್ರಾಮ ದೈವಗಳು ಇರುತ್ತವೆ. ಹೀಗೆ ಊರಿನ ಸಂರಕ್ಷಣೆಗಾಗಿ ಹುಟ್ಟಿದವಳು ಎಂಬ ಪ್ರತೀತಿಯಿದೆ[೫]. ಈಕೆ ಊರನ್ನು ಸಲಹುವ ಗ್ರಾಮದ ಅಧಿದೇವತೆ. ಜನ ಜಾನುವಾರುಗಳಿಗೆ ರೋಗ ಹೋಗಿಸುವ ದೇವಿಯಂತಲೂ ಕರೆಯುತ್ತಾರೆ. ಪ್ರತಿಯೊಂದು ಗ್ರಾಮದಲ್ಲಿ ಊರಮ್ಮ ಇರುತ್ತಾರೆ. ಈ ದೈವವನ್ನು ಊರ ಮಾರಮ್ಮ, ಮಾರಮ್ಮ, ಗಾಳೇಮ್ಮ, ಉಗ್ರ ದೇವತೆಯೆಂತಲೂ ಕರೆಯುವರು. ಈ ದೇವಿಗೆ ವಿಶೇಷವಾಗಿ ಮಂಗಳವಾರ, ಶುಕ್ರವಾರ ಪೂಜೆ ಮಾಡಲಾಗುವುದು. ಅಲ್ಲದೇ ದಸರದಲ್ಲಂತೂ ಈ ದೇವಿಗೆ ವಿವಿಧ ತರಹದ ಪೂಜೆಯನ್ನು ಮಾಡುವುದು. ಊರನ್ನು ನೋಡಿಕೊಂಡು ಹೋಗುವ ಈ ದೇವತೆಗೆ ಒಂದು ಕುಟುಂಬಕ್ಕೆ ಸಂಬಂಧಿಸಿದವಳಾಗಿರದೇ ಇಡೀ ಊರಿನ ಸಮೂಹಕ್ಕೆ ಸಂಬಂಧಿಸಿದವಳಾಗಿರುವವಳು. ಬಿತ್ತುವಾಗ, ಬೆಳೆಬಂದಾಗ, ಬೆಳೆ

ಕೊಯ್ಯುವಾಗ ಈ ದೇವಿಯ ಪೂಜೆಯನ್ನು ಉರಿನ ಜನರು ಸೇರಿ ಮಾಡುವರು. ಮುಖ್ಯವಾಗಿ ದೇವಿಯ ಗುಡಿಯನ್ನೆಲ್ಲಾ ಸ್ವಚ್ಛಮಾಡಿ ಸುಣ್ಣ-ಬಣ್ಣಗಳಿಂದ ಅಲಂಕರಿಸುತ್ತಾರೆ. ಮಾವಿನ ತೋರಣ ಕಟ್ಟುತ್ತಾರೆ. ದೇವಿಯ ಮೂರ್ತಿಗೆ ಬಣ್ಣವನ್ನು ಬಳಿಯುವರು. ಬಣ್ಣವೆಲ್ಲವು ಮುಗಿದನಂತರ ಕಣ್ಣಿಗೆ ಬಣ್ಣ ಬಳಿಯುವಾಗ ದೇವಿಯು ಉಗ್ರವಾಗಿರುವುದರಿಂದ ಆಕೆಯ ಕಣ್ಣು ನಮ್ಮ ಮೇಲೆ ಬೀಳದಿರಲೆಂದು ಕಣ್ಣಿಗೆ ಬಣ್ಣ ಬಡಿಯುವುದು ಮುಗಿದ ನಂತರವೇ ಕುರಿ ಕಡಿಯುವ ರೂಢಿ ಇಲ್ಲಿದೆ. ನಂತರ ಮೆರವಣಿಗೆಯೊಂದಿಗೆ ಹೋಗಿ ಭೂಮಿಯ ನೀರನ್ನು ತರುವುದಕ್ಕೆ ಗಂಗೆಯ ಹೋಗಿ ಬರುವುದು ಎನ್ನುವರು. ಈ ಮೆರವಣಿಗೆಯಲ್ಲಿ ಡೊಳ್ಳು ಪ್ರಮುಖ ವಾದ್ಯವಾಗಿರುತ್ತದೆ. ಇದರ ಜೊತೆಗೆ ತಮಟೆ, ಕೊಂಬು ಕಹಳೆ ಇತರೆ ವಾದ್ಯಗಳೂ ಸಮೇತ ಪಂಜನ್ನು ಹಿಡಿದುಕೊಂಡು ಉತ್ಸವವನ್ನು ವಿಜೃಂಭಣೆಯಿಂದ ನಡೆಸುವರು.

**ಸಂಪ್ರದಾಯ (ಆಚರಣೆಗಳು)**

ಒಂದು ಸಂಪ್ರದಾಯವೆಂದರೆ ಒಂದು ಗುಂಪು ಅಥವಾ ಸಮಾಜದಲ್ಲಿ ಸಾಂಕೇತಿಕ ಅರ್ಥ ಅಥವಾ ಹಿಂದಿನ ಮೂಲಗಳೊಂದಿಗೆ ವಿಶೇಷ ಪ್ರಾಮುಖ್ಯತೆಯನ್ನು ಹೊಂದಿರುವ ಒಂದು ನಂಬಿಕೆ ಅಥವಾ ನಡವಳಿಕೆಯಾಗಿದ್ದು, ನಿರ್ದಿಷ್ಟ ಸಂಸ್ಕೃತಿಯ ಕಲಾತ್ಮಕ ಪರಂಪರೆಯ ರೂಪವೇ ಸಂಪ್ರದಾಯಗಳಾಗಿವೆ. ದೈನಂದಿನ ಜೀವನದಲ್ಲಿ ಕುಡತಿನಿ ಗ್ರಾಮದ ಜನತೆ ಸದಾ ಒಳಿತನ್ನೇ ಬಯಸುವ ಮಾನವನ ಆಲೋಚನೆ, ನಂಬಿಕೆ, ಉದ್ದೇಶಗಳು ಸೇರಿ ಸಂಪ್ರದಾಯಗಳು ಜನ್ಮತಾಳಿವೆ. ಇಂತಹ ಧರ್ಮ ಧಾರ್ಮಿಕ ಹಿನ್ನೆಲೆ ಕಾರಣವಾಗುತ್ತದೆ. ಇದರಲ್ಲಿ ದಾನ, ವ್ರತ, ನದಿ ತೀರ್ಥ, ಕ್ಷೇತ್ರ, ಪಾಪ, ಪುಣ್ಯ ಇತ್ಯಾದಿ ಅಂಶ ಸೇರುತ್ತವೆ. ಕುಡುತಿನಿ ಪರಿಸರದ ಹಾಲು ಮತಸ್ಥರ ನೆಲೆಯಾಗಿದೆ[5]. ಇವರು ಮೈಲಾರಲಿಂಗ ಬೀರ ದೇವರು ಮತ್ತು ಶಕ್ತಿ ದೇವತೆಗಳ ಆರಾಧನೆ ಮಾಡುತ್ತಾರೆ ಧಾರ್ಮಿಕವಾಗಿ ಹಾಲು ಮತಸ್ಥರು (ಕುಡತಿನಿ ಕುರುಬರು) ತಮ್ಮದೇ ಆದ ಧಾರ್ಮಿಕ ಸಾಂಪ್ರದಾಯ ಆಚರಣೆ ನಂಬಿಕೆ ಹೊಂದಿರುವುದು ಕಂಡುಬರುತ್ತದೆ.

**ಉತ್ಸವಗಳು**

- **ದಸರಾ ಹಬ್ಬ**

ಕರ್ನಾಟಕವು ದಸರಾ ಹಬ್ಬಕ್ಕೆ ಪ್ರಸಿದ್ಧವಾಗಿದೆ. ವಿಜಯನಗರ ಕಾಲದಲ್ಲಿ ಭವ್ಯವಾಗಿ ಆಚರಣೆಗೊಳಪಡುತ್ತಿದ್ದ ಹಬ್ಬವಾಗಿದ್ದರಿಂದ ಇಂದು ನಾಡಹಬ್ಬವಾಗಿ ಆಚರಣೆಗೊಳ್ಳುತ್ತಿದೆ. ನಾಡಿನ ಜನತೆ ಅತ್ಯಂತ ಶ್ರದ್ಧೆ- ಭಕ್ತಿಯಿಂದ ಇದನ್ನು ಆಚರಿಸುತ್ತಾರೆ. ಹಂಪಿ ಪರಿಸರಕ್ಕೆ

ಹೊಂದಿಕೊಂಡಿರುವ ಒಂದು ಕಾಲದಲ್ಲಿ ಸಾಮ್ರಾಜ್ಯದ ಭಾಗವೇ ಆಗಿದ್ದ ಕುಡತಿನಿ ಪರಿಸರದಲ್ಲಿ ದಸರಾ ಹಬ್ಬವನ್ನು ಅತ್ಯಂತ ವೈಭವದಿಂದ ಆಚರಿಸುತ್ತಾರೆ. ಇದನ್ನು ಶ್ರೀ ಚಾಮುಂಡೇಶ್ವರಿಯು ರಾಕ್ಷಸರನ್ನು ಸಂಹಾರ ಮಾಡಿದ ಪ್ರತೀಕವಾಗಿ ಅಶ್ವಿಜ ಪಾಡ್ಯದಿನದಿಂದ ನವಮಿಯವರೆಗೆ ಒಂಭತ್ತು ದಿನಗಳ ಕಾಲ ಈ ಹಬ್ಬವನ್ನು ಆಚರಿಸುತ್ತಾರೆ.

- **ಗಣೇಶ ಚತುರ್ಥಿ**

ಸ್ವಾತಂತ್ರ್ಯ ಚಿಂತನೆ ಮತ್ತು ಕ್ರಾಂತಿ ವಿಚಾರಗಳ ಪ್ರಚಾರಕ್ಕಾಗಿ ಬಾಲಗಂಗಾಧರ ತಿಲಕ್‌ರು ಆರಂಭಿಸಿದ ಗಣೇಶ ಉತ್ಸವವು ಇಂದು ಧಾರ್ಮಿಕ ರೂಪವನ್ನು ಪಡೆದುಕೊಂಡು ಹಿಂದೂಗಳ ಪ್ರಮುಖ ಹಬ್ಬವಾಗಿ ಮಾರ್ಪಡಾಗಿವೆ. ಇದನ್ನು ಶ್ರಾವಣ ಕಳೆದು ಬಾದ್ರಪದ ಶುದ್ಧ ಚರ್ತುಥಿಯಂದು ಗಣೇಶನ ಮೂರ್ತಿಯನ್ನು ಮನೆ, ಬೀದಿ, ಅಂಗಡಿ, ಶಾಲೆ, ಕಛೇರಿ, ಮತ್ತು ದೇವಾಲಯಗಳಲ್ಲಿ ಕೂಡಿಸಿ ಶ್ರದ್ಧಾಭಕ್ತಿಗಳಿಂದ ಮೂರು ದಿನಗಳ ಕಾಲ ಪೂಜಿಸಿ ಅವನಿಗೆ ಕಾಯಿ–ಕರ್ಪೂರ, ಎಡೆ–ತಾಂಬೂಲಗಳನ್ನು ಅರ್ಪಿಸಿ ಮೂರುದಿನದ ನಂತರ ವಾದ್ಯಘೋಷಗಳೊಂದಿಗೆ ಮೆರವಣಿಗೆಯ ಮೂಲಕ ಒಯ್ದು ಕೆರೆ, ಬಾವಿ, ಕಾಲುವೆಗಳಲ್ಲಿ ವಿಸರ್ಜನೆಮಾಡುವರು.

- **ಡೊಳ್ಳುವಾದ್ಯ ಹುಟ್ಟು**

ಈ ಗ್ರಾಮದಲ್ಲಿ ಅನೇಕ ಸಂಸ್ಕೃತಿ ಮತ್ತು ಸಂಪ್ರದಾಯಕ್ಕೆ ಹೆಸರುವಾಸಿಯಾಗಿದ್ದು, ಧಾರ್ಮಿಕವಾಗಿ ಹಾಲು ಮತಸ್ಥರು ಅಂದಾಗ ಕುರುಬರ ಕುಲದೈವ ಬೀರಪ್ಪ ದೈವವಾಗಿದೆ[೬]. ಈ ಕುಡತಿನಿ ಹಾಲು ಮತಸ್ಥರ ದೇವದುಂಬಿ ಎಂದು ಕರೆಯುತ್ತಾರೆ. ಇದು ಕುರುಬರ ಕುಲ ದೈವವಾದ ಬೀರಪ್ಪನಿಗೆ ಅತ್ಯಂತ ಪ್ರಿಯವಾದ ವಾದ್ಯವಾಗಿದೆ. ಬೀರಪ್ಪ ಡೊಳ್ಳಾಸುರ ಎಂಬ ರಾಕ್ಷಸಿ ಕೊಂದು ಅವನ ಧರ್ಮ ಪಕ್ಕೆಲುಬುಗಳಿಂದ ಡೊಳ್ಳನ್ನು ತಯಾರಿಸಿ ಬಾರಿಸಿದೆನೆಂದು ಪುರಾಣಗಳು ಹೇಳಿವೆ ಮತ್ತು ಚಾರವಾದಕನ ಕತೆಯನ್ನು ಪುರಾಣಗಳು ತಿಳಿಸುತ್ತವೆ[೭]. ಐತಿಹಾಸಿಕವಾಗಿ ಕುರುಬರ ಈ ಡೊಳ್ಳಿನ ಸಹಾಯದಿಂದ ಕಾಡ ಕ್ರೂರ ಮೃಗ ಎದುರಿಸಿ ಪಶುಸಂಗೋಪನೆ ಮಾಡುತ್ತಿದ್ದರು.

## ಡೊಳ್ಳಾಸುರನ ಕತೆ

ಡೊಳ್ಳಾಸುರನೆಂಬ ರಾಕ್ಷಸನಿದ್ದ. ಈತನಿಗೆ ತಾನೊಬ್ಬನೇ ಈ ಲೋಕದಲ್ಲಿರಬೇಕೆಂಬ ಆಸೆ. ಈ ಕಾರಣಕ್ಕೆ ಶಿವನನ್ನು ಮೆಚ್ಚಿಸಿಕೊಳ್ಳುವುದಕ್ಕೆ ಘೋರವಾದ ತಪಸ್ಸು ಮಾಡಿದ. ತಪ್ಪಸಿಗೆ ಮೆಚ್ಚಿದ ಶಿವ ಪ್ರತ್ಯಕ್ಷವಾಗಿ ಏನು ಬೇಕೆಂದು ಕೇಳಿದ. ಆಗ ರಾಕ್ಷಸ ಶಿವನನ್ನೇ (ನಿನ್ನನ್ನೇ) ನುಂಗುವ ಆಸೆಯನ್ನು ವ್ಯಕ್ತಪಡಿಸಿದ. ಇದಕ್ಕೆ ಒಪ್ಪಿಕೊಂಡು ಶಿವ ನನ್ನ ದೇಹದಲ್ಲಿ ನನ್ನ ಅರ್ಧಾಂಗಿಯ ಪಾಲು ಇದೆ. ಆಕೆಯ ಅಪ್ಪಣೆಯನ್ನು ಪಡೆದುಕೊಂಡು ಬರುವ ಭರವಸೆಯನ್ನು ವ್ಯಕ್ತಪಡಿಸಿದ. ಪತ್ನಿಯ ಅನುಮತಿಯನ್ನು ಶಿವ ಪಡೆದುಕೊಂಡು ಮತ್ತೆ ವಾಪಾಸ್ಸು ಬಂದು ಪಂಚರಾತ್ರಿಗಳು ಕೂಡಿದಾಗ ಹೊರಗಡೆ ಬಿಡಬೇಕು ಅನ್ನುವ ಕರಾರಿನೊಂದಿಗೆ ಡೊಳ್ಳಾಸುರನಿಗೆ ದೇಹವನ್ನು ಒಪ್ಪಿಸಿದ. ಡೊಳ್ಳಾಸುರ ಶಿವನನ್ನು ಹೊರಗಡೆ ಬಿಡಲಿಲ್ಲ. ಪಂಚರಾತ್ರಿಗಳು ಕೂಡಿದ ನಂತರ ಶಿವ ಕಾಣಿಸದಿರುವುದಕ್ಕೆ ಆರಂಭಿಸಿದ. ಬೆಳೆಯುತ್ತಾ ಹೋದಂತೆಲ್ಲಾ ಡೊಳ್ಳಾಸುರನ ಹೊಟ್ಟೆ ದೊಡ್ಡದಾಗಿ ಸೀಳಿಹೋಯ್ತು. ಶಿವ ಅಸುರನ ಡೊಕ್ಕೆಯಿಂದ ಪಡಗ ಮಾಡಿದ. ಚರ್ಮವನ್ನು ಪಡಗಕ್ಕೆ ಮುಚ್ಚಿದ. ಕರಳು ತೆಗೆದು ಹಗ್ಗ ಮಾಡಿದ. ಕೊರೆಹಲ್ಲುಗಳನ್ನು ಗುಣಿ ಮಾಡಿದ. ಅಂಗೈಯನ್ನು ಕಡಿದು ತಾಳಮಾಡಿದ. ತಾನು ಹೊರಗಡೆ ಬಂದಿರುವುದು ಪಾರ್ವತಿಗೆ ಗೊತ್ತಾಗಲಿ ಎಂದು ಆ ಡೊಳ್ಳನ್ನು ಹೆಗಲಿಗೆ ಹಾಕಿಕೊಂಡು ಹಾರ್‍ಯಾಡಿ ಬಡಿಯುವುದಕ್ಕೆ ಆರಂಭಿಸಿದ ಆಗ

"ಸ್ವಾಮಿ ನಮ್ಮಯ ದೇವರ ಬಂದಾರ ಬನ್ನೀರೆ
ದೇವಿ ನಮ್ಮಯ ದೇವರ ಬಂದಾಗ ಬನ್ನೀರೆ"

ಎಂದು ಶಿವನ ಭಕ್ತರು ಹಾಡಿ ಪಾರ್ವತಿಯನ್ನು ಕರೆದರು. ಆ ಸಂದರ್ಭದಲ್ಲಿ ಕರೆದ ವಿಧಾನವೇ ಇವತ್ತು ಡೊಳ್ಳಿನ ಹಾಡುಗಳ ಪಲ್ಲವಿ ಆಯ್ತು ಈ ನಂಬಿಕೆ ಈಗಲೂ ಕಲಾವಿದರಲ್ಲಿದೆ.

## ಚಾರವಾದಕನ ಕತೆ

ಶಿವ ಒಂದು ದಿನ ಪಾರ್ವತಿಯ ಕಣ್ಣು ತಪ್ಪಿಸಿ, ಕೈಲಾಸವನ್ನು ತೊರೆದು ಸಿದ್ಧಗಿರಿಯಲ್ಲಿ ತಪಸ್ಸು ಮಾಡಲು ಆರಂಭಿಸಿದ. ತಪಸ್ಸಿಗೆ ವಿಘ್ನವುಂಟಾಗದಿರಲೆಂದು ಚಾರವಾದಕನೆಂಬ ದೈತ್ಯನನ್ನು ಕಾವಲಿಟ್ಟುಕೊಂಡ. ಶಿವ ತಪಸ್ಸು ಮಾಡುತ್ತಿರುವುದು ನಾರದನಿಂದ ಅಕಸ್ಮಾತಾಗಿ ಪಾರ್ವತಿಗೆ ತಿಳಿಯುತ್ತದೆ. ಪಾರ್ವತಿ ನಂದಿಯನ್ನೇರಿ ಶಿವನಲ್ಲಿಗೆ ಬರುತ್ತಾಳೆ. ಚಾರವಾದಕ ಶಿವನ ದರ್ಶನಕ್ಕೆ ಅವಕಾಶ ಮಾಡಿಕೊಡುವುದಿಲ್ಲ. ಪಾರ್ವತಿ ಕುಪಿತಗೊಳ್ಳುತ್ತಾಳೆ. ಪಾರ್ವತಿ

ವಾಹನವಾದ ನಂದಿಗೂ ಸೇವಕನಿಗೂ ಘೋರಯುದ್ಧ ನಡೆಯುತ್ತದೆ. ಕೋಪಿತ ನಂದಿ ತನ್ನ ಕೊಂಬಿನಿಂದ ದೈತ್ಯನನ್ನು ತಿವಿದು ಗಾಯಗೊಳಿಸುತ್ತದೆ. ಗಾಯಗೊಂಡ ದೈತ್ಯ ಸಾವಿನ ಸ್ಥಿತಿಯಲ್ಲಿ ಕಿರುಚಿಕೊಳ್ಳುತ್ತಾನೆ. ಈ ಧ್ವನಿಯ ಆರ್ಥನಾದ ಶಿವನಿಗೂ ಮುಟ್ಟುತ್ತದೆ. ತಕ್ಷಣ ಹೊರಗಡೆ ಬರುತ್ತಾನೆ. ಚಾರವಾದಕನಿಗೆ ಶಿವ-ಪಾರ್ವತಿಯ ಸಂಬಂಧದ ವಾಸ್ತವ ತಿಳಿಯುತ್ತದೆ. ತಪ್ಪಿನ ಅರಿವಾಗುತ್ತದೆ. ತನ್ನನ್ನ ಕ್ಷಮಿಸಿ ಶಾಶ್ವತವಾಗಿ ಭೂ ಲೋಕದಲ್ಲಿ ಉಳಿಸುವಂತೆ ಶಿವನಲ್ಲಿ ಅಂಗಲಾಚುತ್ತಾನೆ. ಈತನ ಬೇಡಿಕೆಗೆ ಮನಸೋತ ಶಿವ ಚಾರವಾದಕನನ್ನು ಅಮರನನ್ನಾಗಿಸುವುದಕ್ಕೆ ಡೊಳ್ಳನ್ನು ಸೃಷ್ಟಿಸಿದನು.

"ಚರ್ಮವ ತೆಗೆದು ಆಸ್ತಿಯ ಬಿಗಿದು
ನರದ ಹಗ್ಗವನು ಮಾಡಿದನು
ಪೂರ್ಣವಾಗಿ ನಾದ ಏರಲು ಬ್ರಹ್ಮಕ್ಕೆ
ಹಿರಿಡೊಳ್ಳು ಎಂಬ ಹೆಸರಿಟ್ಟನು".

ಆ ಡೊಳ್ಳನ್ನು ಕುರಿಕಾಯುವ ಕುರುಬನ ಕೈಯಲ್ಲಿಟ್ಟು ಮತ್ತೆ ಕೈಲಾಸಕ್ಕೆ ಹೋದನು.

**ಶ್ರೀರಾಮ ನವಮಿ**

ಈ ಗ್ರಾಮದಲ್ಲಿ ಒಂದು ಹಬ್ಬವಾಗಿ ಇಡೀ ಊರಿನ ಜನರು ಆಚರಿಸುತ್ತಾರೆ. ಮುಖ್ಯವಾಗಿ ಏಳು ಆಂಜನೇಯ ದೇವಸ್ಥಾನಗಳಿಗೆ ಭಕ್ತರು ಪೂಜೆ-ಪುನಸ್ಕಾರ ಮತ್ತು ದೇವರಿಗೆ ಎಡೆ ನೀಡಿ ಭಜನೆಗಳ ಮುಖಾಂತರ ದೇವಾಲಯಗಳು ಕಂಗೊಳಿಸುತ್ತಿದ್ದು ಮುಖ್ಯವಾಗಿ ಸೀತಾರಾಮ ದೇವಾಲಯದಲ್ಲಿ ಶ್ರೀರಾಮ ನವಮಿ ದಿನದಂದು ಭಕ್ತಾಧಿಗಳಿಗೆ ಅನ್ನ ಪ್ರಸಾದವು ದಿನ ಪೂರ್ತಿ ಇರುತ್ತದ[೧೦]. ಹೀಗೆ ಈ ಶ್ರೀರಾಮ ನವಮಿಯನ್ನು ಆಚರಿಸುತ್ತಾರೆ.

➢ **ಶಿವ ರಾತ್ರಿ**

ಕುಡತಿನಿ ಗ್ರಾಮದ ಹೆಚ್ಚಾಗಿ ಶೈವ ಧರ್ಮದ ಪ್ರಭಾವವು ಹೆಚ್ಚಾಗಿದ್ದು, ಈ ಶಿವರಾತ್ರಿ ದಿನದಂದು ಭಕ್ತಾದಿಗಳು ಅ ದಿನದ ಮುಂಜಾನೆಯಿಂದಲೇ ಶಿವನ ಎಲ್ಲಾ ದೇವಸ್ಥಾನಗಳಲ್ಲಿ ಪೂಜೆ, -ಪುನಸ್ಕಾರಗಳು, ಭಜನೆಗಳು ರಾತ್ರಿ ಇಡೀ ನಡೆಯುತ್ತವೆ. ರಾತ್ರಿಹೊತ್ತು ಕೆಲವರು ಜಾಗರಣೆಯನ್ನು ಸಹ ಮಾಡುವರು[೧೧]. ಮುಖ್ಯವಾಗಿ ಡೊಳ್ಳುಕುಣಿತವು ಆಕರ್ಷಕವಾಗಿದ್ದು ಇಡೀ ದಿನವೆಲ್ಲಾ ಇರುತ್ತವೆ.

## ➢ ಭಂಡಾರ

ಇಂದು ಕುಡುತಿನಿ ಹಾಲುಮತಸ್ಥರು ಮತ್ತು ಊರಿನ ಜನರು ಭಂಡಾರ ಒಡೆಯ ಪದ್ಧತಿ ಧಾರ್ಮಿಕ ಆಚರಣೆಯಲ್ಲಿ ಒಂದಾಗಿದೆ. ಬೀರ ದೇವರ ಮೈಲಾರಲಿಂಗಪ್ಪ ಮತ್ತು ಶಕ್ತಿ ದೇವತೆ ಎಲ್ಲಮ್ಮ ಧರಿಸುವ ಪವಿತ್ರ ವಸ್ತುವಾಗಿದೆ. ಈ ಭಂಡಾರ ಹಾಲುಮತಸ್ಥರ ಹಣೆಯ ಮೇಲೆ ಧಾರ್ಮಿಕ ಸಂಕೇತವಾಗಿ ಆರಾಧಿಸುತ್ತಾರೆ. ಜಾತ್ರೆ ಸಂದರ್ಭ ಕಟ್ಟುವ ಆಚರಣೆ ಮೂಲಕ ಜಾತ್ರೆಯು ಆರಂಭವಾಗುತ್ತದೆ. ಮುಕ್ತಾಯದ ಹಂತದಲ್ಲಿ ಭಂಡಾರ ಒಡೆಯುವ ಮೂಲಕ ಜಾತ್ರೆಯನ್ನು ಮುಗಿಸುತ್ತಾರೆ. ಈ ಪ್ರದೇಶಗಳಲ್ಲಿ ಇದನ್ನು ಬೀರಪ್ಪ ಮತ್ತು ಮೈಲಾರರು ತಮ್ಮ ತಂಗಿಯಾದ ಯಲ್ಲಮ್ಮನಿಗೆ ಕೊಟ್ಟು ಅವಳಿಂದ ಕವಡೆಯನ್ನು ಪಡೆದರೆಂಬ ಪೌರಾಣಿಕ ನಂಬಿದೆ ಇದೆ.

## ➢ ಕುಂಭಸೇವೆ

ಕುಡತಿನಿ ಗ್ರಾಮದಲ್ಲಿ ವಿಶೇಷವಾದ ಹಾಗೂ ಅತಿ ಪ್ರಾಮುಖ್ಯತೆಯನ್ನು ಪಡೆದಿರುವ ಆಚರಣೆಗಳಲ್ಲಿ ಇದು ಒಂದಾಗಿದೆ. ಕುಡತಿನಿ ಗೂಳ್ಯ ಬಳ್ಳಾರಿ ಭಕ್ತರಾಗಿದ್ದು, ಪ್ರಸಿದ್ದ ಹಾಲು ಮತದ ದೈವ ಗೂಳ್ಯದ ಗಾದಿಲಿಂಗೇಶ್ವರಗೂ ಕುಂಭಸೇವೆ ಹೊರುವುದು ತಿಳಿದು ಬರುತ್ತದೆ. ಎರಡೂ ಹೊಸ ಮಡಿಕೆಗಳಲ್ಲಿ ಒಂದರಲ್ಲಿ ಅನ್ನವನ್ನು ಇನ್ನೊಂದರ ಐದು ಬಗೆಯ ತರಕಾರಿ ಬೇಯಿಸಿ ಸಿದ್ಧಗೊಳಿಸಲಾಗುತ್ತದೆ. ಈ ಅಲಂಕೃತ ಮಡಿಕೆ ಕಂಬಳಿ ಧರಿಸಿ ಒಬ್ಬ ಭಕ್ತನು ಹೊತ್ತುಕೊಂಡು ದೇವಾಲಯದವರಿಗೆ ಮೆರವಣಿಗೆ ಮೂಲಕ ಬರುತ್ತಾನೆ. ಬಂದವನು ಐದು ಸಲ ಪ್ರದಕ್ಷಣೆ ಹಾಕುತ್ತಾರೆ. ಗುಡಿಯ ಬಳಿ ಕಂಬಳಿ ಗದ್ದುಗೆ ಮಾಡಿ ಕುಂಭವನ್ನು ಇಳಿಸುತ್ತಾರೆ. ನಂತರ ಪೂಜೆ ಮಾಡುತ್ತಾರೆ. ಈ ಆಚರಣೆ ಕುಡತಿನಿ ಪರಿಸರದಲ್ಲಿ ಕಂಡು ಬಂದಿದೆ. ಇಷ್ಟು ಅನೇಕ ಸಂಪ್ರದಾಯ ಆಚರಣೆ ಕಂಡು ಬರುತ್ತದೆ. ಗಂಡಾರ್ತಿ ಸೇವೆ, ಡೋಣಿ ಸೇವೆ, ಜೋತಿ ನುಂಗು ಸೇವೆ, ಹಟ್ಟಿ ಪೂಜೆ ಬಾಸಿಂಗ ಕಟ್ಟುವುದು ಹೀಗೆ ಹಲವು ಸಂಪ್ರದಾಯಗಳು ಕಂಡು ಬರುತ್ತದೆ.

**ಕೊನೆ ಟಿಪ್ಪಣಿಗಳು**

೧. ನರಸಿಂಹ ಮೂರ್ತಿ ಎಚ್.ವಿ., ೨೦೦೨, ನಮ್ಮ ಹಬ್ಬಗಳು, ಪು.೧೨.

೨. ಅದೇ, ಪು.೩೪.

೩. ಅದೇ, ಪು.೪೨.

೪. ಶಿವಕುಮಾರ ಸ್ವಾಮಿ, ೧೯೮೮, ಕರ್ನಾಟಕ ಜಾತ್ರೆಗಳು, ಪು.೧೮.

೫. ಲಿಂಗಯ್ಯ ಡಿ., ೧೯೮೪, ಕರ್ನಾಟಕದ ಗ್ರಾಮ ದೇವತೆಗಳು, ಪು.೩೪.

೬. ಅದೇ, ಪು.೩೬.

೭. ಶಿವಕುಮಾರ ಸ್ವಾಮಿ, ೧೯೮೮, ಪೂರ್ವೋಕ್ತ, ಪು.೨೩.

೮. ಅದೇ, ಪು.೨೬.

೯. ಅದೇ, ಪು.೪೬.

೧೦. ಲಿಂಗಯ್ಯ ಡಿ., ೧೯೮೪, ಪೂರ್ವೋಕ್ತ, ಪು.೫೪.

೧೧. ಅದೇ, ಪು.೫೬.

# ಅಧ್ಯಾಯ- ಆರು

## ಸಮಾರೋಪ

ಕರ್ನಾಟಕ ರಾಜ್ಯದ ಮಧ್ಯದಲ್ಲಿರುವ ಬಳ್ಳಾರಿ ಜಿಲ್ಲೆ ಭವ್ಯವಾದ ಇತಿಹಾಸ ಪರಂಪರೆಗಳಿಂದ ಕೂಡಿದೆ. ಕರ್ನಾಟಕ ಸಾಂಸ್ಕೃತಿಕ ಪರಂಪರೆಯನ್ನು ಇಂದಿಗೂ ಮುಂದುವರಿಸಿಕೊಂಡು ಬಂದಿರುವ ಅನೇಕ ಜಿಲ್ಲೆಗಳ ಪೈಕಿ ಬಳ್ಳಾರಿಯು ಒಂದು. ಬಳ್ಳಾರಿ ಜಿಲ್ಲೆಯನ್ನು ಇತಿಹಾಸವನ್ನು ಗಮನಿಸಿದರೆ ಅಲ್ಲಿನ ಜಾನಪದರ ಸಂಸ್ಕೃತಿಯನ್ನು ಬಿಂಬಿಸುವ, ಪೋಷಿಸುವ ಅಗತ್ಯವಿದೆ. ಜಿಲ್ಲೆಯ ವಿಶಿಷ್ಟವಾದ ಭೌಗೋಳಿಕ ಪರಿಸರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಅಡಗಿರುವ ಇತಿಹಾಸ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ತಿಳಿಸುವುದು ಅತ್ಯವಶ್ಯಕವೆಂದು ಹೇಳಬಹುದು.

ಬಳ್ಳಾರಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಹಲವಾರು ಅಧ್ಯಯನಗಳು ನಡೆದಿವೆ. ಆದರೆ ಬಳ್ಳಾರಿ ತಾಲೂಕಿನ ಕುಡತಿನಿ ಪ್ರದೇಶದ ಇತಿಹಾಸ, ಸ್ಥಳನಾಮ, ಶಾಸನಗಳು, ದೇವಾಲಯ ಕುರಿತಂತೆ ಪ್ರಸ್ತುತ ಅಧ್ಯಯನವು ಬಹುಮುಖ್ಯವಾಗಿವೆ. ಅಲ್ಲದೇ ಈ ಕುಡತಿನಿ ಪರಿಸರದಲ್ಲಿ ಪಾರಂಪರಿಕವಾಗಿ ನಡೆದು ಬಂದಿರುವ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆ, ಜಾತ್ರೆ-ಉತ್ಸವ ಬಗ್ಗೆ ಅಧ್ಯಯನ ಮಾಡಿದಾಗ ಅನೇಕ ಮೌಖಿಕ ಮತ್ತು ಚಾರಿತ್ರಿಕಾಂಶಗಳು ಬೆಳಕಿಗೆ ಬಂದಿದ್ದನ್ನು ಗಮನಿಸಬಹುದು. ಈ ತಾಲೂಕಿನ ಇತಿಹಾಸ ಮತ್ತು ವಿಶ್ಲೇಷಣಾತ್ಮಕ ಹಾಗೂ ವಿವರಣಾತ್ಮಕವಾಗಿ ಕ್ಷೇತ್ರ ಕಾರ್ಯದ ಮೂಲಕ ಕಟ್ಟಿಕೊಡುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ಒಂದು ಪ್ರದೇಶದ ಉನ್ನತಿಗೆ ಅಲ್ಲಿನ ಭೌಗೋಳಿಕ ಪರಿಸರ ಬಹುಮುಖ್ಯವಾಗುತ್ತದೆ. ಮಾನವನ ಅಲೆಮಾರಿ ಜೀವನದಿಂದ ಹಿಡಿದು ಕ್ರಮೇಣ ಒಂದು ಸುಸಂಬದ್ಧವಾದ ಸಾಮಾಜಿಕ ವ್ಯವಸ್ಥೆ ನಿರ್ಮಾಣವಾಗುವಲ್ಲಿ ಅಲ್ಲಿನ ಪರಿಸರ ಬಹಳ ಮುಖ್ಯ ಭೌಗೋಳಿಕವಾಗಿ ಸಮೃದ್ಧಿಯನ್ನು ಪಡೆದಿರುವ ಇಲ್ಲಿನ ಬೆಟ್ಟ-ಗುಡ್ಡ, ಕಾಡು, ನೀರು ಮೊದಲಾದ ನೈಸರ್ಗಿಕ ಸಂಪತ್ತು ತೀಕ್ಷ್ಣವಾಗಿ ನಾಗರಿಕತೆಯತ್ತ ದಾಪುಗಾಲನ್ನಿಡಲು ಕಾರಣವಾಯಿತು. ತರಿಕಳಗುಡ್ಡ, ಮೂರುತಲೇಗುಡ್ಡ, ಜಂಬಪ್ಪನಗುಡ್ಡ, ತಾಯಮ್ಮನಗುಡ್ಡ, ಬಸವನಗುಡ್ಡ, ಚಿಂತನಗುಡ್ಡ, ಕವಳೆಗುಡ್ಡಗಳ ನಡುವೆ ಇರುವ ಈ ಗ್ರಾಮದ ಭೌಗೋಳಿಕ ಪರಿಸರವು ಬಹಳ ವಿಶಿಷ್ಟವಾಗಿದೆ. ಪ್ರಾಗೈತಿಹಾಸಕಾಲದಿಂದ ನವ ಶಿಲಾಯುಗದವರೆಗಿನ ಅವಶೇಷಗಳು ಕಡಿಮೆ ಪ್ರಮಾಣದಲ್ಲಿರುವುದರಿಂದ ಆ ಕಾಲದ

ಸಂಪೂರ್ಣ ಚಿತ್ರಣ ಬಹಳ ಕಡಿಮೆ. ಅಂದು ಪ್ರಾಚೀನ ಜನವರ್ಗದ ಸಾಮಾಜಿಕ ಕಟ್ಟುಪಾಡುಗಳಗೆ ಒಳಗಾಗಿದ್ದ ಜನವರ್ಗ ವಾಸವಾಗಿತ್ತೆಂಬುದನ್ನು ಅಲ್ಲಗಳೆಯಲಿಕ್ಕಾಗದು. ಚಾರಿತ್ರಿಕವಾಗಿ ಬಾದಾಮಿ ಚಾಲುಕ್ಯರಿಂದ ಹಿಡಿದು ವಿಜಯ ನಗರದ ಅರಸರವರೆಗೆ ಕುಡತಿನಿಯನ್ನು ಆಳಿದ ರಾಜವಂಶಗಳು ನೀಡಿದ ದಾನದತ್ತಿ ವಿಚಾರ, ಆಡಳಿತ ವೈಖರಿ, ಸಾಂಸ್ಕೃತಿಕ ಕೊಡುಗೆ, ಕುಡತಿನಿ ಪರಿಸರದೊಡನೆ ಈ ರಾಜ ವಂಶಗಳು ಹೊಂದಿದ್ದ ಸಂಬಂಧದ ಸ್ವರೂಪವನ್ನು ಕುರಿತು ವಿಶ್ಲೇಷಿಸಲಾಗಿದೆ.

ಯಾವುದೇ ಪ್ರದೇಶದ ಚರಿತ್ರೆಯನ್ನು ಕುರಿತು ಅಧ್ಯಯನ ಮಾಡುವಾಗ ಅಲ್ಲಿನ ಸ್ಥಳನಾಮ ಕುರಿತು ವಿವೇಚಿಸುವುದು ಬಹಳ ಮುಖ್ಯವಾಗಿದೆ. ಭೌಗೋಳಿಕವಾಗಿ ಇಲ್ಲಿ ಬೆಟ್ಟ, ಗುಡ್ಡ, ಅನೇಕ ನದಿ, ತೊರೆ, ಹಳ್ಳ, ಕೊಳ್ಳ, ಅರಣ್ಯ ಪ್ರದೇಶಗಳು ಕಂಡುಬರುವುದರಿಂದ ಆದಿ ಮಾನವನ ಪ್ರಾಗೈತಿಹಾಸಿಕ ಕಾಲಘಟ್ಟದಿಂದ ಚಾರಿತ್ರಿಕ ಕಾಲದ ರಾಜರು ಹಾಗೂ ಪಾಳೇಗಾರರು ಆಳ್ವಿಕೆ ಮಾಡಿದ ಪ್ರಾಚೀನ ಕುರುಹುಗಳು ಇವೆ. ಈ ಭಾಗಬನ್ನು ಗುರುತಿಸಲು ಇಲ್ಲಿನ ಸ್ಥಳನಾಮಗಳು ಹಿನ್ನಲೆಯಿಂದಲೇ ನಿಷ್ಪನ್ನಗೊಂಡಿದೆ. ಈ ಪ್ರದೇಶದಲ್ಲಿ ಬರುವ ಲೌಕಿಕ ಹಾಗೂ ಧಾರ್ಮಿಕ ಕಟ್ಟಡಗಳನ್ನು ಶಾಸನ, ಚಾರಿತ್ರಿಕ ದಾಖಲೆಗಳು, ಪ್ರಾಕ್ಚಾರಿತ್ರಿಕ ಕುರುಹುಗಳು, ಭೌಗೋಳಿಕ ಲಕ್ಷಣಗಳ ಮೂಲಕ ವಿಶ್ಲೇಷಿಸಲಾಗಿದೆ. ಯಾವುದೇ ಒಂದು ಪ್ರದೇಶದ ಇತಿಹಾಸವನ್ನು ಪುನರಚಿಸಲು ಇರುವ ಪ್ರಾಕ್ತಾನಾಧಾರಗಳಲ್ಲಿ ಶಾಸನಗಳು ಬಹುಮುಖ್ಯ. ಕುಡತಿನಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನಕ್ಕೆ ಅಮೂಲ್ಯವಾದ ಸಂಪತ್ತು ಶಾಸನಗಳು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪೂರಕ ಮಾಹಿತಿಗಳನ್ನು ಕಲೆ ಹಾಕುವಾಗ ಅನೇಕ ಕೊರತೆಗಳು ಕಂಡುಬಂದವು. ಎಷ್ಟೋ ವೇಳೆ ಸೂಕ್ತ ಮಾಹಿತಿಯೇ ದೊರೆಯದೇ ಹೊದಂತಹ ಸಂದರ್ಭಗಳು ಎದುರಾದವು. ಸತತ ಪ್ರಯತ್ನ ಹಾಗೂ ಶಾಸನಗಳ ಅಧ್ಯಯನದ ಮೂಲಕ ಈ ಕೊರತೆಯನ್ನು ಆದಷ್ಟು ತುಂಬಿಕೊಡಲಾಗಿದೆ. ಒಟ್ಟಾರೆ ಶಾಸನಗಳ ಹಿನ್ನಲೆ ಹಾಗೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಿಕ್ಕಂತಹ ಮಾಹಿತಿಗಳನ್ನು ಆಧರಿಸಿ ಕುಡತಿನಿಯ ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ದಾನದತ್ತಿಗಳ ಬಗ್ಗೆ ಚರ್ಚಿಸಲಾಗಿದೆ.

ಸಮಾಜದ ಎಲ್ಲ ಕ್ಷೇತ್ರಗಳ ಮೇಲೆ ಪ್ರಭಾವ ಬೀರಿದ್ದು ಧರ್ಮ. ಕುಡತಿನಿಯಲ್ಲಿ ಜೈನ, ವೈಷ್ಣವ, ಶೈವ ಧರ್ಮಗಳು ಪ್ರಮುಖ ಸ್ಥಾನದಲ್ಲಿತ್ತು. ದೇವಾಲಯಗಳಿಗೆ ಸಂಬಂಧಿಸಿದಂತೆ ಕ್ಷೇತ್ರ ವೀಕ್ಷಣೆಯ ಮೂಲಕ ವಾಸ್ತು ವಿನ್ಯಾಸವನ್ನು ಗಮನಿಸಲಾಗಿದೆ. ಈ ಪರಿಸರದಲ್ಲಿ ಅಧಿಕ ಸಂಖ್ಯೆಯಲ್ಲಿ ದೇವಾಲಯಗಳಿದ್ದರೂ, ಕೆಲವು ದೇವಾಲಯಗಳು ಕಲಾ ಶ್ರೇಷ್ಠತೆಯನ್ನು ಪಡೆದಿವೆ.

ಜೈನ ಬಸದಿಗಳು, ವೈಷ್ಣವ ದೇವಾಲಯಗಳು, ಪ್ರಾಚೀನ ಶೈವ ದೇವಾಲಯಗಳು ಇದಕ್ಕೆ ಉದಾಹರಣೆ. ಕೆಲವು ದೇವಾಲಯಗಳು ಪೂಜೆ-ಪುನಸ್ಕಾರ, ಜೀರ್ಣೋದ್ಧಾರಗಳಿಂದ ವಂಚಿತವಾಗಿ ಕನಿಷ್ಠ ಸ್ಥಿತಿಯಲ್ಲಿದ್ದು ಅದರಲ್ಲೂ ಕೆಲವು ಜೈನ ಬಸದಿಗಳು ಶೈವ ದೇವಾಲಯಗಳಾಗಿ ಪರಿವರ್ತನೆಗೊಂಡಿವೆ. ನಮ್ಮ ಅಧ್ಯಯನದ ವ್ಯಾಪ್ತಿಗೆ ಬಂದ ದೇವಾಲಯಗಳ ವಾಸ್ತುಕಲೆಯು ಕಲ್ಯಾಣ ಚಾಲುಕ್ಯರ ಕಲೆಯ ಲಕ್ಷಣಗಳಿಂದ ಕೂಡಿದೆ. ಕುಡತಿನಿ ಪ್ರದೇಶದ ದೇವಾಲಯಗಳ ವಾಸ್ತುಕಲೆಯ ಪ್ರಾರಂಭ ಯಾವ ರೀತಿ ಆಯಿತೆಂದು ತಿಳಿಯಲು ಪ್ರಯತ್ನಿಸಲಾಗಿದೆ. ಇವರ ಕಾಲದಲ್ಲಿ ಶುದ್ಧ ಗ್ರಾಮೀಣ ಸಂಸ್ಕೃತಿಯನ್ನು ಹೊಂದಿರುವ ಕುಡತಿನಿ ಪ್ರದೇಶದಲ್ಲಿ ಅನೇಕ ಸಮುದಾಯಗಳು ವಾಸವಾಗಿದ್ದು, ಅವರ ಸಂಪ್ರದಾಯ ಆಚರಣೆಗಳಲ್ಲಿ ವೈವಿಧ್ಯತೆಯನ್ನು ವಿಶೇಷತೆಯನ್ನು ಕಾಣಬಹುದು. ಸಮಾಜದಲ್ಲಿ ದುಡಿಯುವ ವರ್ಗ ತುಂಬಾ ಶ್ರಮ ಜೀವಿಗಳಾಗಿದ್ದರಿಂದ ಕಾಲಕಾಲಕ್ಕೆ ಈ ಪ್ರದೇಶ ಸಾಂಸ್ಕೃತಿಕವಾಗಿ ಶ್ರೀಮಂತವಾಗುತ್ತ ಬಂದಿದೆ. ಕುಟುಂಬ ವ್ಯವಸ್ಥೆಯಲ್ಲಿ ಪುರುಷರು, ಮಹಿಳೆಯರು ಸದಸ್ಯರಾಗಿದ್ದರು. ಸಮಾಜದಲ್ಲಿ ಬ್ರಾಹ್ಮಣರು ತಮ್ಮನ್ನು ಉನ್ನತ ಸ್ಥಾನದಲ್ಲಿಟ್ಟುಕೊಂಡು ಸಾಮಾಜಿಕ ವ್ಯವಸ್ಥೆಯನ್ನು ರೂಪಿಸುತ್ತಿದ್ದರು.

ಕುಡತಿನಿಯ ಸಂಪ್ರದಾಯ, ಆಚರಣೆಗಳು, ಜಾತ್ರೆ ಹಾಗೂ ಉತ್ಸವಗಳು ಪ್ರಾದೇಶಿಕತೆಗೆ ಅನುಗುಣವಾಗಿ ನಡೆಯುವಂತಹುಗಳಾಗಿವೆ. ಸೀಮಿತದ ಈ ಪ್ರದೇಶದಲ್ಲಿ ನಡೆಯುವ ಜಾತ್ರೆ ಮತ್ತು ಉತ್ಸವಗಳು ಸಾಂಸ್ಕೃತಿಕವಾಗಿ ಬಹಳ ವೈಶಿಷ್ಟ್ಯತೆಯನ್ನು ಹೊಂದಿದೆ. ಜಾತ್ರೆಯ ಅಂಗವಾಗಿ ನಡೆಯುವ ವಿವಿಧ ಸೇವೆಗಳು, ಸುಲಭ ಮತ್ತು ಸರಳ ಪರಿಕರಗಳಿಂದ ನಡೆಸುವಂತಹಗಳಾಗಿವೆ ಹಾಗೂ ಆಕರ್ಷಕವೂ ಕುತೂಹಲಭರಿತವು ಆದ ಧಾರ್ಮಿಕ ಸೇವೆಗಳಿವೆ. ಸಾಂಸ್ಕೃತಿಕ ಪರಂಪರೆಯ ಹಿನ್ನಲೆಯಲ್ಲಿ ಬೆಳೆದಿರುವ ಕುಡತಿನಿಯಲ್ಲಿ ಅನೇಕ ದೇವರಗಳಿದ್ದು 'ಎಲ್ಲಿ ಮನುಜರು ಅಲ್ಲಿ ದೇವರು, ಎಲ್ಲಿ ದೇವರು ಅಲ್ಲೆಲ್ಲ ಜನ ಸಮೂಹ, ಜಾತ್ರೆ ಇದ್ದೇ ಇರುತ್ತದೆ. ಜನರ ಭಕ್ತಿಯ ಪ್ರೀತಿಯ ಮನರಂಜನೆಯ ಕುರುಹಗಳಾಗಿ ಇವೆಲ್ಲಾ ಜರುಗುತ್ತವೆ. ಯಾವ ದೇವರ ಹೆಸರಲ್ಲಿ ಏನೇ ಮಾಡಿದರೂ ಭಕ್ತಿಯೇ ಮೂಲವಾಗಿರುತ್ತದೆ. ಯಾವುದೇ ನದಿಯ ಎಲ್ಲಿಯೇ ಹರಿದರೂ ಹೋಗಿ ಸೇರುವುದು ಸಾಗರವನ್ನೇ ಎಂಬಂತೆ ಈ ಪ್ರದೇಶದಲ್ಲಿ ಜಾತ್ರೆ ಮತ್ತು ಉತ್ಸವಗಳು ನಡೆಯುವುದು ನಂಬಿಕೆಯಾಗಿದೆ, ಭಕ್ತಿಯ ದ್ಯೋತಕಗಳಾಗಿವೆ. ಪುಷ್ಪ ಜಾತಿ ಹಲವು, ಆದರೆ ವಾಸನೆ ಮಾತ್ರ ಒಂದೇ ಹೇಗೋ, ಹಾಗೆಯೇ ನೂರು ದೇವರುಗಳಾದ್ದಿರೂ ಭಕ್ತಿ ಮಾತ್ರ ಒಂದೇ ಆಗಿದೆ. ಆದರೆ ಆಚರಿಸುವಲ್ಲಿ ವೈವಿಧ್ಯತೆಯಿಂದ ಕೂಡಿದ್ದು, ಹಲವು ಕೂತೂಹಲಕರ ಮಾಹಿತಿಗಳನ್ನು ಕಲೆ ಹಾಕಿ ವಿಶ್ಲೇಷಿಸಲಾಗಿದೆ.

ಪ್ರಸ್ತುತ ಪ್ರೌಢ ಪ್ರಬಂಧವು ಪರಿಪೂರ್ಣವೆನ್ನುವಂತೆ ರಚಿಸಿದ್ದೇನೆ ಎಂದು ಹೇಳಲಾಗದು, ಪರಿಪೂರ್ಣತೆ ಎನ್ನುವುದು ಆದರ್ಶವೇ ಹೊರೆತು ಪ್ರಾಯೋಗಿಕವಾಗಿ ಕಷ್ಟಸಾಧ್ಯದ ಸಂಗತಿ. ಕುಡುತಿನಿ ಪ್ರದೇಶಕ್ಕೆ ಸಂಬಂಧಿಸಿದ ಲೇಖನಗಳನ್ನು, ಗ್ರಂಥಗಳನ್ನು ಪರಾಮರ್ಶಿಸಿ ಸಾಧ್ಯವಾದಷ್ಟರ ಮಟ್ಟಿಗೆ ನನ್ನ ಇತಿಮಿತಿಯಲ್ಲಿ ಸಮಗ್ರವಾಗಿ ಈ ಪ್ರೌಢ ಪ್ರಬಂಧವನ್ನು ರಚಿಸಿದ್ದೇನೆ. ಈ ಪ್ರಬಂಧದಲ್ಲಿ ನೀಡಿರುವ ಮಾಹಿತಿಗಳು ಪ್ರಾದೇಶಿಕ ವಿಸ್ತೃತ ಅಂತರ್‌ಶಿಸ್ತೀಯ ಅಧ್ಯಯನಕ್ಕೆ ಉಪಯುಕ್ತ ಮಾಹಿತಿಗಳಾಗಬಹುದು. ಈ ಹಿನ್ನಲೆಯಲ್ಲಿ ಇಡೀ ಕುಡಿತಿನಿ ಪ್ರದೇಶದ ಸಾಂಸ್ಕತಿಕ ಇತಿಹಾಸ ರಚನೆಯಾಗಬೇಕಾಗಿದೆ.

**ಅಧ್ಯಯನದ ಫಲಿತಗಳು**

ಯಾವುದೇ ಒಂದು ಸಂಶೋಧನೆಯು ಫಲಪ್ರದವಾಗಿರಬೇಕಾದರೆ ಆ ಸಂಶೋಧನೆಯ ಗುರಿ–ಉದ್ದೇಶಗಳನ್ನು ಈಡೇರಿಸಿಕೊಳ್ಳುವುದು ಸಂಶೋಧಕನ ಆದ್ಯ ಕರ್ತವ್ಯ. ಈ ಸಂಶೋಧನಾ ಪ್ರಬಂಧವು ಕೆಲವು ಮೂಲ ಗುರಿ–ಉದ್ದೇಶಗಳನ್ನು ಹೊಂದಿದ್ದು ಅವುಗಳನ್ನು ಸಫಲಗೊಳಿಸಲಾಗಿದೆ.

೧) ಕುಡತಿನಿ ಪರಿಸರದ ಭೌಗೋಳಿಕ ಸ್ವರೂಪ, ಇಲ್ಲಿನ ಸಸ್ಯ ಸಂಪತ್ತು , ಪ್ರಾಣಿ ಸಂಪತ್ತು ಮತ್ತು ಇಲ್ಲಿನ ಖನಿಜ ಸಂಪನ್ಮೂಲಗಳ ಬಗ್ಗೆ ನಿಖರವಾದ ಮಾಹಿತಿಯನ್ನು ಶೋಧಿಸಲಾಯಿತು.

೨) ಈ ಪ್ರದೇಶದಲ್ಲಿ ವಾಸವಾಗಿದ್ದ ಪ್ರಾಗೈತಿಹಾಸಿಕ ಅಥವಾ ಆದಿ ಮಾನವನಿಗೆ ಸಂಬಧಿಸಿದ ಗವಿಯ ವರ್ಣಚಿತ್ರಗಳು, ಆಯುಧೋಪಕರಣಗಳು ಮತ್ತು ಬೂದಿ ದಿಬ್ಬದ ಬಗ್ಗೆ ಶೋಧಿಸಲಾಯಿತು.

೩) ಈ ಪ್ರದೇಶದ ರಾಜಕೀಯ ಇತಿಹಾಸವು ಮೌರ್ಯರಿಂದ ಆರಂಭಿಸಿ ಕಲ್ಯಾಣ ಚಾಲುಕ್ಯರು, ವಿಜಯ ನಗರದ ಅರಸರಿಂದ ಸ್ಥಳೀಯ ಪಾಳೇಗಾರರವರೆಗಿನ ಇತಿಹಾಸವನ್ನು ಕಾಲಾನುಕ್ರಮದಲ್ಲಿ ಈ ಪ್ರಬಂಧದಲ್ಲಿ ವಿವರಿಸಲಾಗಿದೆ.

೪) ಈ ಪ್ರದೇಶದಲ್ಲಿರುವ ಶೈವ, ವೈಷ್ಣವ ಧರ್ಮದ ದೇವಾಲಯಗಳನ್ನು ಗುರುತಿಸಿ ಪಟ್ಟಿಮಾಡುವುದರೊಂದಿಗೆ ಆ ದೇವಾಲಯಗಳ ವಾಸ್ತುಶಿಲ್ಪ ಶೈಲಿ ಮತ್ತು ಅದರ ನಿರ್ಮಾಣದ ಹಿನ್ನಲೆಯನ್ನು ಮತ್ತು ಪ್ರಸ್ತುತ ಸ್ಥಿತಿ–ಗತಿಗಳನ್ನು ಸಂಕ್ಷೇಪ್ತವಾಗಿ ಚರ್ಚಿಸಲಾಗಿದೆ.

೫) ಈ ಪ್ರದೇಶದಲ್ಲಿನ ಲೌಕಿಕ ಕಟ್ಟಡಗಳಾದ ಕೆರೆ, ಬಾವಿಗಳು ಮತ್ತು ಅವುಗಳ ನಿರ್ಮಾಣದ ಹಿನ್ನಲೆಯನ್ನು ಹಾಗೂ ನಿರ್ಮಾಣದ ಶೈಲಿಯನ್ನು ವಿವರಿಸಲಾಗಿದೆ.

೬) ಈ ಪ್ರದೇಶದಲ್ಲಿ ದೊರಕಿರುವ ಶಾಸನಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳನ್ನು ಕಾಲಾನುಕ್ರಮದಲ್ಲಿ ವಿಶ್ಲೇಷಿಸಿ ಅವುಗಳ ಆಧಾರದ ಮೇಲೆ ಈ ಪ್ರದೇಶದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಜೀವನವನ್ನು ಕುರಿತು ವಿವರಿಸಲಾಗಿದೆ.

೭) ಈ ಪ್ರದೇಶದಲ್ಲಿನ ಜನರ ಜೀವನ-ವಿಧಾನಗಳನ್ನು ಹಾಗೂ ಅಲ್ಲಿ ಪ್ರಚಲಿತದಲ್ಲಿರುವ ಐತಿಹ್ಯಗಳು ಅಲ್ಲಿನ ಜನರ ರೂಢಿ-ಸಂಪ್ರದಾಯಗಳು, ಜಾತ್ರೆ, ಉತ್ಸವಗಳ ಕುರಿತು ವಿವರಿಸಲಾಗಿದೆ.

## ಅನುಬಂಧಗಳು

### ಪರಾಮರ್ಶನ ಗ್ರಂಥಗಳು

ಅಪರ್ಣ ಕೂ.ಸ., ೧೯೯೯, ದೇವಾಲಯ ವಾಸ್ತುಶಿಲ್ಪ ಪರಿಚಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಟ್ರೇಶ್ ಎಂ., ಬಳ್ಳಾರಿ ಜಿಲ್ಲೆಯ ಕೋಟೆಗಳು, ೨೦೧೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

ಗುರುಮೂರ್ತಿ ಪೆಂಡಕೂರು, ೨೦೦೬, ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,

ಚಂದ್ರಶೇಖರ ಟಿ.ಆರ್., ೧೯೮೪, ಬಳ್ಳಾರಿ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ, ಶ್ರೀ ಸಿದ್ಧಶಿವಾಚಾರ್ಯ ಜ್ಞಾನ ಪ್ರಕಾಶನ, ಹೂವಿನಹಡಗಲಿ.

ಚಂದ್ರಶೇಖರಯ್ಯ ಬಿ.ಎಂ., ೨೦೦೫, ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಪರಂಪರೆ, ಸಿ.ವಿ.ಜಿ. ಪಬ್ಲಿಕೇಶನ್, ಬೆಂಗಳೂರು.

ಚಿದಾನಂದಮೂರ್ತಿ ಎಂ., ೧೯೮೪, ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಚೆನ್ನಕ್ಕ ಎಲಿಗಾರ, ೧೯೭೭, ಮಾಸ್ತಿಕಲ್ಲು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ತಾಳಂಕಿ ಸುಬ್ಬರಾಯ ಶ್ರೇಷ್ಠಿ, ೧೯೫೫, ಕಾರ್ತಿಕೇಶ್ವರಸ್ವಾಮಿ ಲಾವಣಿ, ಕೃಷಿ ಪವರ್ ಪ್ರೆಸ್, ಬಳ್ಳಾರಿ.

ಬಸವರಾಜ ಮಲ್ಲಶೆಟ್ಟಿ, ೧೯೮೨, ಸೊಂಡೂರು ಶ್ರೀ ಕುಮಾರಸ್ವಾಮಿ ಜಾನಪದ ಹಾಡುಗಳು, ಕರ್ನಾಟಕ ಪತ್ರಿಕಾ ಪ್ರೈವೆಟ್ ಲಿಮಿಟೆಡ್, ಸೊಂಡೂರು

ಬಾಲಸುಬ್ರಮಣ್ಯ, ೨೦೦೪, ಕುರುಗೋಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜುನಾಥ ಸಿ.ಯು., ೨೦೧೨, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ (೧೧೫೦–೧೩೪೦), ಚಿತ್ಕಾಲಾ ಪ್ರಕಾಶನ, ಕುಪ್ಪಂ

ನರಸಿಂಹ ಮೂರ್ತಿ ಎಚ್.ವಿ., ೨೦೦೨, ನಮ್ಮ ಹಬ್ಬಗಳು, ವಿಕಾಸ ಪ್ರಕಾಶನ, ಉಡುಪಿ.

ನಾಗಯ್ಯ ಜೆ.ಎಂ., ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ

ರವೀಂದ್ರನಾಥ ಕೆ., ೨೦೦೫, ಬಳ್ಳಾರಿ ಜಿಲ್ಲೆಯ ಶಾಸನ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

ರಾಜಪ್ಪ ಟಿ.ಎನ್., ೧೯೯೫, ಬಳ್ಳಾರಿ ಜಿಲ್ಲೆಯ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ರುಷಬೇಂದ್ರಾಚಾರ್ ಎ., ೨೦೦೪, ಕಾರ್ತೀಕಾಯಣ, ಶ್ರೀಕುಮಾರ ಪ್ರಕಾಶನ, ಸಂಡೂರು.

ಲಿಂಗಪ್ಪ ಮುದೇನೂರು, ೨೦೦೫, ಸೊಂಡೂರು ಕುಮಾರಸ್ವಾಮಿ, ಸೃಷ್ಟಿ ಪ್ರಕಾಶನ, ಬೆಂಗಳೂರು.

ಲಿಂಗಯ್ಯ. ಡಿ., ೧೯೮೪, ಕರ್ನಾಟಕದ ಗ್ರಾಮದೇವತೆಗಳು, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

ವಾಸುದೇವ ಬಡಿಗೇರ, ೧೯೯೭, ಸಂಡೂರು ಪರಿಸರದ ಕಾರ್ತಿಕೇಯ ತಪೋವನ: ಚಾರಿತ್ರಿಕ ಅಧ್ಯಯನ, ಮಯ ಪ್ರಕಾಶನ, ಕಮಲಾಪುರ.

ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹನುಮಂತರೆಡ್ಡಿ ವೈ., ೨೦೦೮, ಬಳ್ಳಾರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಇತಿಹಾಸ ಮಂಡಲ, ಧಾರವಾಡ.

ಶಿವಕೂಮಾರ ಸ್ವಾಮಿ ಸಿ.ಎಸ್., ೧೯೮೮, ಕರ್ನಾಟಕ ಜಾತ್ರೆಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಶೇಷಶಾಸ್ತ್ರಿ ಆರ್., ೧೯೮೨, ಶಾಸನ ಪರಿಚಯ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಶೇಷಶಾಸ್ತ್ರಿ ಆರ್., ೨೦೧೭, ಕರ್ನಾಟಕದ ವೀರಗಲ್ಲುಗಳು, ಕಾಮಧೇನು ಪುಸ್ತಕ ಭವನ, ಬೆಂಗಳೂರು.

ಶ್ರೀನಿವಾಸ ಎನ್., ೨೦೧೧, ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸುರೇಶ್ ಕೆ.ಎಂ., ೧೯೯೯, ಕರ್ನಾಟಕ ದೇವಾಲಯ ಕೋಶ: ಬಳ್ಳಾರಿ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಅಪ್ರಕಟಿತ ಎಂ.ಫಿಲ್ ಮತ್ತು ಪಿಎಚ್.ಡಿ ಮಹಾಪ್ರಬಂಧಗಳು**

ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೬, ಬಳ್ಳಾರಿ ಜಿಲ್ಲೆಯ ಕಲೆಕ್ಟರುಗಳ ಆಳ್ವಿಕೆ (೧೮೦೦-೧೯೪೭ ಒಂದು ಸಮೀಕ್ಷೆ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸವಿತಾ, ೨೦೦೬, ಸೊಂಡೂರು ಪರಿಸರದ ಗ್ರಾಮದೇವತೆಗಳು, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹೇಮಲತಾ ಜಿ., ೨೦೦೬, ಸೊಂಡೂರು ವೀರಶೈವ ಸಮುದಾಯದ ಆಚರಣೆಗಳು, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶಾಸನ ಸಂಪುಟಗಳು**

Annual Report of South Indian Epigraphy

Annual Report of the Mysore Archaeological Department

Annual Report on South Indian Epigraphy

Epigraphic Carnatica

Epigraphic India

Karnataka Inscriptions

South Indian Inscriptions

ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧

**ವಿಶ್ವಕೋಶಗಳು**

ಕರ್ನಾಟಕ ವಿಶ್ವಕೋಶ, ಮೈಸೂರು

ಕನ್ನಡ ವಿಷಯ ವಿಶ್ವಕೋಶ (ಇತಿಹಾಸ ಮತ್ತು ಪುರಾತತ್ವ), ಮೈಸೂರು

ಕರ್ನಾಟಕ ಭಾರತಿ, ಧಾರವಾಡ

ವಕ್ತೃ ವಿವರಗಳು

| ಕ್ರ.ಸಂ. | ಹೆಸರು | ವಯಸ್ಸು | ಸ್ಥಳ |
|---|---|---|---|
| ೧ | ನಾರಾಯಣರಾವ್ ವಿ | ೬೬ | ಕುಡತಿನಿ |
| ೨ | ಶ್ರೀನಿವಾಸ್ ಅದ್ದಿ | ೫೪ | ಕುಡತಿನಿ |
| ೩ | ಯಲ್ಲಪ್ಪ | ೩೬ | ಕುಡತಿನಿ |
| ೪ | ಗೋಪಾಲ | ೩೧ | ಕುಡತಿನಿ |
| ೫ | ವೀರನಗೌಡ | ೫೫ | ಕುಡತಿನಿ |
| ೬ | ಹುಚ್ಚಪ್ಪ | ೬೨ | ಕುಡತಿನಿ |
| ೭ | ಕಿಷ್ಟಪ್ಪ ಎ | ೭೩ | ಕುಡತಿನಿ |
| ೮ | ಗೋವಿಂದ | ೬೦ | ಕುಡತಿನಿ |
| ೯ | ಪಂಪಾಪತಿ ಹಟ್ಟಿ | ೬೨ | ಕುಡತಿನಿ |
| ೧೦ | ಸೋಮಪ್ಪ ಸಿ | ೩೨ | ಯರಂಗಳಿಗಿ |
| ೧೧ | ಗಜೇಂದ್ರ | ೩೬ | ಯರಂಗಳಿಗಿ |
| ೧೨ | ಅಂಬರೀಶ ಚಾನಾಳ್ | ೫೭ | ಕುರುಗೋಡು |


KARNATAKA POLITICAL MAP
MAHARASHTRA
N
W
E
S
Bidar
BIDAR
Gulbarga
GULBARGA
ANDHRA PRADESH
Bijapur
BIJAPUR
Bagalkot
BAGALKOT
Raichur
RAICHUR
Belgaum
BELGAUM
GOA
Dharwar
DHARWAR
Gadag
GADAG
KOPPAL
Koppal
Bellary
BELLARY
Karwar
UTTAR KANNAD
Haveri
Davangere
Chitradurga
CHITRADURGA
SHIMOGA
Shimoga
ARABIAN SEA
Udupi
UDUPI
CHIKMAGALUR
Chikmagalur
Tumkur
TUMKUR
KOLAR
Kolar
Mangalore
DAKSHIN KANNAD
Hassan
HASSAN
BANGALORE (URBAN)
Mandya
BANGALORE (RURAL)
Map Not To Scale
Madikeri
KODAGU
Mysore
MYSORE
TAMIL NADU
Chamrajnagar
CHAMRAJNAGAR
KERALA
State Capital
District Headquarters
State Boundary
International Boundary
Copyright © Prokerala.com

ಕರ್ನಾಟಕ ಭೂಪಟ




ಬಳ್ಳಾರಿ ಜಿಲ್ಲಾ ಭೂಪಟ




ಕುಡತಿನಿ ಗೋಗಲ್ ನಕ್ಷೆ

ಛಾಯಾಚಿತ್ರಗಳು



ಕುಡತಿನಿ ಮತ್ತು ತೋರಣಗಲ್ಲು ಮಾರ್ಗ ಮಧ್ಯದಲ್ಲಿರುವ ಬೂದಿ ದಿಬ್ಬ



ಚಂದ್ರಹಾಸ ದೇವಾಲಯ



ತಿಂಗಳೇಶ್ವರ ದೇವಾಲಯ




ದೊಡ್ಡಹೊಸಗೇರೇಶ್ವರ ದೇವಾಲಯ



ದೊಡ್ಡಹೊಸಗೇರೇಶ್ವರ ದೇವಾಲಯದ ಮೂರ್ತಿ



ಕುಮಾರಸ್ವಾಮಿ ದೇವಾಲಯ



ಕುಮಾರಸ್ವಾಮಿ ದೇವಾಲಯದ ಸಭಾ ಮಂಟಪ



ವೆಂಕಟೇಶ್ವರ ಮೂರ್ತಿ



ದೊಡ್ಡ ಅಂಜನೇಯ ದೇವಾಲಯ



ದೊಡ್ಡ ಅಂಜನೇಯ ಮೂರ್ತಿ



ಹಾಲುಬಾವಿ ಅಂಜನೇಯ ಮೂರ್ತಿ



ಕನಕೇರಿ ಅಂಜನೇಯ ಮೂರ್ತಿ



ಅರಳಿ ಕಟ್ಟೆ ಅಂಜನೇಯ ಮೂರ್ತಿ



ಗವಿ ಹನುಮಂತ ಮೂರ್ತಿ



ಕಲ್ಲೂರ ಅಂಜನೇಯ ದೇವಾಲಯ



ವರಗೈ ಅಂಜನೇಯ ದೇವಾಲಯ



ಸಂಗಮೇಶ್ವರ ದೇವಾಲಯ



ಹಾಲುಬಾವಿ



ಪಾಂಡುರಂಗಪ್ಪ ಬಾವಿ



ವಿಭೂತಿ ಬಾವಿ



ಮದನಿಕೆ ಶಿಲ್ಪ



ನಾಗರ ಶಿಲ್ಪಗಳು



ಕುಮಾರಸ್ವಾಮಿ ದೇವಾಲಯದ ಸಭಾಮಂಟಪದಲ್ಲಿರುವ ಶಾಸನ




ಕುಮಾರಸ್ವಾಮಿ ದೇವಾಲಯದ ಮುಂದೆ ಇರುವ ಶಾಸನಗಳು



ಜಕ್ಕೇರು ಬಾವಿ ಹತ್ತಿರ ವಿರುವ ಶಾಸನ



ದೊಡ್ಡ ಅಂಜನೇಯ ದೇವಾಲಯದ ಮುಂದಿರುವ ವೀರಮಹಾಸತಿಗಲ್ಲು

